# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಜೂನ್ ೩೦, ೨೦೧೬ (ಆಷಾಢ ೯, ಶಕ ವರ್ಷ ೧೯೩೮)<br>Bengaluru, Thursday, June 30, 2016 ( Ashadha 9, Shaka Varsha 1938) | ಸಂಚಿಕೆ ೨೬<br>Issue 26 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ :** ಸೋಗಾನೆ ಹೊಸೂರು ಹಾಲು ಉತ್ಪಾದಕರ ಸಹಕಾರ ಸಂಘ, ನಿ,, ಶಿವಮೊಗ್ಗ ತಾಲ್ಲೂಕು ಇದರ 2011–12 ರಿಂದ 2013–14ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಮರು ಲೆಕ್ಕಪರಿಶೋಧನೆ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ಇವರ ಪತ್ರ ಸಂಖ್ಯೆ:ತಪಫ/ಬೆಂವಿಶಿ/5/2014–15/4125, ದಿ: 07–10–2015

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪ್ರಸ್ತಾವೆಯಲ್ಲಿ ಸೋಗಾನೆ ಹೊಸೂರು ಹಾಲು ಉತ್ಪಾದಕರ ಸಂಘ, ನಿ., ಶಿವಮೊಗ್ಗ ತಾಲ್ಲೂಕು, ಈ ಸಂಘದಲ್ಲಿ 2012–13 ಮತ್ತು 2013–14ನೇ ಸಾಲುಗಳಲ್ಲಿ ರೂ. 8,25,422–00 ಗಳು ದುರುಪಯೋಗವಾಗಿದೆ ಎಂದು ಈ ಬಗ್ಗೆ ಕಲಂ 64 ರ ವಿಚಾರಣೆ ಅಥವಾ 65ರ ಪರಿವೀಕ್ಷಣೆ ನಡೆಸಿ ಎಲ್ಲಾ ತಪ್ಪಿತಸ್ಥರ ವಿರುದ್ಧ ಕ್ರಮ ಜರುಗಿಸಬೇಕೆಂದು ಶ್ರೀ ಕೆ. ಚೆನ್ನೇಗೌಡ ಹಾಗೂ ಇತರರು ಕೋರಿರುತ್ತಾರೆ. ಅದರಂತೆ ಸದರಿ ಸಂಘದ 2010–11 ರಿಂದ 2013–14ರ ಅವಧಿಯ ಲೆಕ್ಕಪರಿಶೋಧನೆ ನಿರ್ವಹಿಸಿದ ಸನ್ನದು ಲೆಕ್ಕಪರಿಶೋಧಕರಾದ ಶ್ರೀ ರಘುರಾಮ ಭಟ್ ಹೆಚ್.ಎಸ್. ಶಿವಮೊಗ್ಗರವರು ಸಹ ಇವರು 2012–13 ಮತ್ತು 2013–14ನೇ ಸಾಲುಗಳ ಲೆಕ್ಕಪರಿಶೋಧನೆಯು ದೋಷಪೂರಿತವಾಗಿರುವುದನ್ನು ಒಪ್ಪಿಕೊಂಡಿರುವುದರಿಂದ, ಸದರಿ ವಿಷಯಕ್ಕೆ ಕುರಿತಂತೆ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಶಿವಮೊಗ್ಗ ಇವರಿಗೆ ಪರಿಶೀಲಿಸಿ, ಸ್ಪಷ್ಟ ಅಭಿಪ್ರಾಯದ ವರದಿ ನೀಡುವಂತೆ ಸೂಚಿಸಲಾಗಿತ್ತು. ಉಪ ನಿರ್ದೇಶಕರು, ಶಿವಮೊಗ್ಗ ರವರು ಶ್ರೀ ರಘುರಾಮ್ ಭಟ್ ಹೆಚ್.ಎಸ್. ಸನ್ನದು ಲೆಕ್ಕಪರಿಶೋಧಕರು, ಶಿವಮೊಗ್ಗ ಇವರು ನಿರ್ವಹಿಸಿರುವ 2010–11 ರಿಂದ 2013–14 ನೇ ಸಾಲುಗಳವರೆಗಿನ ಲೆಕ್ಕಪರಿಶೋಧನೆ ಪೈಕಿ 2011–12 ರಿಂದ 2013–14ರ ಅವಧಿಯ ಲೆಕ್ಕಪರಿಶೋಧನೆಯು ದೋಷಪೂರಿತವಾಗಿರುವುದಾಗಿ ತಿಳಿಸುತ್ತಾ, ಕಂಡಿಕೆವಾರು ವರದಿಯನ್ನು ಸಲ್ಲಿಸಿರುವುದಲ್ಲದೇ ದಿನಾಂಕ: 24–12–2014ರ ವಿಶೇಷ ಮಹಾಸಭೆ ನಿರ್ಣಯದಂತೆ ಸನ್ನದು ಲೆಕ್ಕಪರಿಶೋಧಕರಿಂದ 2011–12 ರಿಂದ 2013–14ರ ಅವಧಿಯ ಮರುಲೆಕ್ಕಪರಿಶೋಧನೆಗೆ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2011–12 ರಿಂದ 2013–14 ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಯಲ್ಲಿ ಕಂಡು ಬಂದಿರುವ ನ್ಯೂನತೆಗಳನ್ನು ಪರಿಷ್ಕರಿಸಲು ಮರು ಲೆಕ್ಕಪರಿಶೋಧನೆ ನಡೆಸುವುದು ಸೂಕ್ತವೆಂದು ಭಾವಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ268 ಸಿಎಲ್ಎಂ 2015, ಬೆಂಗಳೂರು, ದಿನಾಂಕ: 15–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸೋಗಾನೆ ಹೊಸೂರು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಶಿವಮೊಗ್ಗ ತಾಲ್ಲೂಕು ಇದರ 2011–12 ರಿಂದ 2013–14ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಮರು ಲೆಕ್ಕ ಪರಿಶೋಧನೆ ಮಾಡಲು ಸನ್ನದು ಲೆಕ್ಕಪರಿಶೋಧಕರನ್ನು ನಿಯೋಜಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶರಿಗೆ ಅನುಮತಿ ನೀಡಿ ಆದೇಶಿಸಿದೆ.

**P.R.307**
**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಹಕಾರ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ರಾಜ್ಯದಲ್ಲಿರುವ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿನ ಸ್ನಾತಕ್ಕೋತ್ತರ ಕೋರ್ಸುಗಳ ಸೀಟುಗಳ ಶುಲ್ಕವನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ವೃತ್ತಿಪರ ಕೋರ್ಸುಗಳ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತು ಸರ್ಕಾರ ಹಾಗೂ ಖಾಸಗಿ ಆಡಳಿತ ಮಂಡಳಿಗಳ ನಡುವೆ ಸಮ್ಮತಾಭಿಪ್ರಾಯ ಒಪ್ಪಂದ ಮಾಡಿಕೊಳ್ಳಲು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 31–03–2016 ರಂದು ಜರುಗಿದ ಸಭೆಯ ನಿರ್ಣಯಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಸಭೆಯ ನಿರ್ಣಯಗಳನ್ವಯ 2016–17 ನೇ ಸಾಲಿನ ಸ್ನಾತಕೋತ್ತರ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳ ಸೀಟು ಹಂಚಿಕೆ & ಶುಲ್ಕ ನಿಗದಿಗೆ ಸಂಬಂಧಿಸಿದಂತೆ ಪರಸ್ಪರ ಒಡಂಬಡಿಕೆ ಮಾಡಿಕೊಳ್ಳುವ ಸಲುವಾಗಿ ರಾಜ್ಯದ ಖಾಸಗಿ ಕಾಲೇಜುಗಳ ಸಂಘಗಳಾದ ಕಾಮೆಡ್–ಕೆ, ಕೆ.ಆರ್.ಎಲ್.ಎಂ.ಪಿ.ಸಿ.ಎ & ಎ.ಎಂ.ಪಿ.ಸಿ.ಕೆ ಸಂಘಗಳ ಅಧ್ಯಕ್ಷರು / ಪ್ರತಿನಿಧಿಗಳೊಂದಿಗೆ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ದಿ: 31–03–2016 ರಂದು ನಡೆದ ಸಭೆಯಲ್ಲಿ 2016–17 ನೇ ಸಾಲಿನ ವೈದ್ಯಕೀಯ & ದಂತ ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳಿಗೆ 2015–16 ನೇ ಸಾಲಿನಲ್ಲಿ ನಿಗದಿಪಡಿಸಿದ ಶುಲ್ಕಕ್ಕಿಂತ ಶೇ. 10 ರಷ್ಟನ್ನು ಹೆಚ್ಚಿಸಲು ತೀರ್ಮಾನಿಸಲಾಗಿರುತ್ತದೆ.

ಮುಂದುವರೆದು, ಸರ್ಕಾರಿ ಕಾಲೇಜುಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಶುಲ್ಕದಲ್ಲಿ ಯಾವುದೇ ಬದಲಾವಣೆ ಮಾಡದಿರಲು ತೀರ್ಮಾನಿಸಲಾಗಿದೆ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳಲ್ಲಿ ಪಿಜಿಸಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನು ಪಾವತಿಸಬೇಕಾಗಿದೆಯೆಂದು, ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಸೇವಾನಿರತ ಅಭ್ಯರ್ಥಿಗಳು ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್–ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು ಹಾಗೂ ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಂತವಾಗಿ ಭರಿಸತಕ್ಕದ್ದೆಂದು ತೀರ್ಮಾನಿಸಲಾಗಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2016–17 ನೇ ಸಾಲಿಗೆ ಶೇ.10 ರಷ್ಟು ಹೆಚ್ಚಿಸಿ ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 84 ಆರ್‌ಜಿಯು 2016, ಬೆಂಗಳೂರು, ದಿನಾಂಕ: 31–03–2016.**

ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ/ದಂತ ವೈದ್ಯಕೀಯ ಸ್ನಾತಕೋತ್ತರ ಕೋರ್ಸುಗಳ ಸೀಟುಗಳ ಪ್ರವೇಶ ಶುಲ್ಕವನ್ನು 2016–17ನೇ ಸಾಲಿಗೆ ಶೇ. 10ರಷ್ಟು ಹೆಚ್ಚಿಸಿ ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶಿಸಲಾಗಿದೆ.

**ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ & ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕಾಮೆಡ್–ಕೆ) ಸ್ನಾತಕೋತ್ತರ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ & ದಂತ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ ಕೋರ್ಸುಗಳ ಸೀಟುಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:**

(₹. ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | ಕಾಮೆಡ್–ಕೆ ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. | ವೈದ್ಯಕೀಯ ಪದವಿ: | | | | |
| (ಅ) | ಕ್ಲಿನಿಕಲ್ | 5,52,000 | 6,00,000 | 3,69,000 | 4,00,000 |
| (ಆ) | ಪ್ಯಾರಾ ಕ್ಲಿನಿಕಲ್ | 1,38,000 | 1,50,000 | 92,000 | 1,00,000 |
| (ಇ) | ಪ್ರಿಕ್ಲಿನಿಕಲ್ | 69,000 | 75,000 | 46,300 | 50,000 |
| 2. | ವೈದ್ಯಕೀಯ ಡಿಪ್ಲೊಮಾ: | | | | |
| (ಅ) | ಕ್ಲಿನಿಕಲ್ | 4,14,000 | 4,55,000 | 2,77,100 | 3,00,000 |
| (ಆ) | ಪ್ಯಾರಾ ಕ್ಲಿನಿಕಲ್ | 1,38,000 | 1,50,000 | 92,000 | 1,00,000 |
| 3. | ದಂತ ವೈದ್ಯಕೀಯ : | | | | |
| (ಅ) | ಪದವಿ ಮತ್ತು ಡಿಪ್ಲೊಮಾ | 2,90,000 | 3,20,000 | 1,88,000 | 2,05,000 |

ರಾಜ್ಯದಲ್ಲಿನ ಖಾಸಗಿ ವೈದ್ಯಕೀಯ & ದಂತ ವೈದ್ಯಕೀಯ ಕಾಲೇಜುಗಳಲ್ಲಿನ (ಕೆ.ಆರ್‌ಎಲ್‌ಎಂ ಪಿಸಿಎ & ಎಎಂಪಿಸಿಕೆ)ಸ್ನಾತಕೋತ್ತರ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ & ದಂತ ವೈದ್ಯಕೀಯ ಡಿಗ್ರಿ/ಡಿಪ್ಲೊಮಾ ಕೋರ್ಸುಗಳ ಸೀಟಗಳಿಗೆ ಪಾವತಿಸಬೇಕಾದ ಶುಲ್ಕದ ವಿವರ:

(₹. ಗಳಲ್ಲಿ)

| ಸಂಖ್ಯೆ | ಕೋರ್ಸುಗಳ ವಿವರ | KRLMPCA & AMPCK ಅಭ್ಯರ್ಥಿಗಳಿಗೆ | | ಪಿಜಿಸಿಇಟಿ ಮೂಲಕ ಸರ್ಕಾರಿ ಕೋಟಾದಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ | |
|---|---|---|---|---|---|
| | | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ | ಪ್ರಸ್ತುತ ನಿಗದಿಪಡಿಸಿರುವ ಶುಲ್ಕ | ಪರಿಷ್ಕೃತ ಶುಲ್ಕ |
| 1. ವೈದ್ಯಕೀಯ ಪದವಿ: | | | | | |
| (ಅ) | ಕ್ಲಿನಿಕಲ್ | 4,18,000 | 4,59,800 | 3,34,000 | 3,67,400 |
| (ಆ) | ಪ್ಯಾರಾ ಕ್ಲಿನಿಕಲ್ | 1,15,000 | 1,26,500 | 92,000 | 1,01.200 |
| (ಇ) | ಪ್ರಿ ಕ್ಲಿನಿಕಲ್ | 57,000 | 62,700 | 46,000 | 50,600 |
| 2. ವೈದ್ಯಕೀಯ ಡಿಪ್ಲೊಮಾ: | | | | | |
| (ಅ) | ಕ್ಲಿನಿಕಲ್ | 3,34,000 | 3,67,400 | 2,68,000 | 2,94,800 |
| (ಆ) | ಪ್ಯಾರಾ ಕ್ಲಿನಿಕಲ್ | 1,15,000 | 1,26,500 | 92,000 | 1,01,200 |
| 3. ದಂತ ವೈದ್ಯಕೀಯ : | | | | | |
| (ಅ) | ಪದವಿ ಮತ್ತು ಡಿಪ್ಲೊಮಾ | 2,43,600 | 2,67,960 | 1,86,400 | 2,05,040 |

ಸರ್ಕಾರಿ ಸ್ವಾಯತ್ತ ವೈದ್ಯಕೀಯ/ದಂತ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ & ದಂತ ವೈದ್ಯಕೀಯ ಕೋರ್ಸುಗಳಿಗೆ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಪಾವತಿಸಬೇಕಾದ ಶುಲ್ಕದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲವಾದ್ದರಿಂದ 2015–16ನೇ ಸಾಲಿನಲ್ಲಿ ಕೆಳಕಂಡಂತೆ ನಿಗದಿಪಡಿಸಬೇಕಾದ ಶುಲ್ಕವನ್ನೇ 2016–17ನೇ ಸಾಲಿನಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳಿಗೂ ನಿಗದಿಪಡಿಸಲಾಗಿದೆ.

ರೂ.ಗಳಲ್ಲಿ

| ಸಂಖ್ಯೆ | ಕೋರ್ಸುಗಳ ವಿವರ | ನಿಗದಿಪಡಿಸಿರುವ ಶುಲ್ಕ |
|---|---|---|
| ಸ್ನಾತಕೋತ್ತರ ಪದವಿ ವೈದ್ಯಕೀಯ ಕೋರ್ಸುಗಳು | | |
| 1 | ಕ್ಲಿನಿಕಲ್ | 20,000 |
| 2 | ಪ್ಯಾರಾ ಕ್ಲಿನಿಕಲ್ | 10,000 |
| 3 | ಪ್ರಿ ಕ್ಲಿನಿಕಲ್ | 5,000 |
| ಸ್ನಾತಕೋತ್ತರ ಡಿಪ್ಲೊಮಾ ಕೋರ್ಸುಗಳು | | |
| 1 | ಕ್ಲಿನಿಕಲ್ | 20,000 |
| 2 | ಪ್ಯಾರಾ ಕ್ಲಿನಿಕಲ್ | 10,000 |
| ಸ್ನಾತಕೋತ್ತರ ಪದವಿ ದಂತ ವೈದ್ಯಕೀಯ ಕೋರ್ಸುಗಳು | | |
| 1 | ಕ್ಲಿನಿಕಲ್ | 20,000 |
| 2 | ಪ್ಯಾರಾ ಕ್ಲಿನಿಕಲ್ | 5,000 |

ಮುಂದುವರಿದು, ಡೀಮ್ಡ್ ವಿಶ್ವವಿದ್ಯಾಲಯಗಳ ವ್ಯಾಪ್ತಿಗೆ ಒಳಪಡುವ ವೈದ್ಯಕೀಯ ಮತ್ತು ದಂತ ವೈದ್ಯಕೀಯ ಕಾಲೇಜುಗಳಲ್ಲಿ ಪಿಜಿಇಟಿ ಮೂಲಕ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳು ನಿಗದಿಪಡಿಸುವ ಶುಲ್ಕವನ್ನೇ ಪಾವತಿಸತಕ್ಕದ್ದು. ಆದರೆ, ಶುಲ್ಕ ಮರುಪಾವತಿಗೆ ಅರ್ಹರಾಗಿರುವ ಸೇವಾನಿರತ ಅಭ್ಯರ್ಥಿಗಳು ಹಾಗೂ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಕಾಮೆಡ್–ಕೆ ಸಂಸ್ಥೆಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ನಿಗದಿಪಡಿಸಿರುವ ಶುಲ್ಕವನ್ನು ಮರುಪಾವತಿಸಲಾಗುವುದು. ಆದರೆ, ವ್ಯತ್ಯಾಸದ ಮೊತ್ತವನ್ನು ಅಭ್ಯರ್ಥಿಗಳೇ ಸ್ವಂತವಾಗಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಮುರಳಿ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ವೈದ್ಯಕೀಯ ಶಿಕ್ಷಣ)

**P.R.308**

**SC-50**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆ, ಮಾಗಡಿ ಲೋಕೋಪಯೋಗಿ ಉಪ ವಿಭಾಗದಲ್ಲಿ 2011–12ನೇ ಸಾಲಿನಲ್ಲಿ ರಸ್ತೆ ಕಾಮಗಾರಿಗಳಲ್ಲಿ ನಡೆದ ಅವ್ಯವಹಾರಗಳ ಕುರಿತು ಶ್ರೀ ಡಿ. ಉದಯಶಂಕರ್, ಹಿಂದಿನ ಅಧೀಕ್ಷಕ ಇಂಜಿನಿಯರ್, ಬೆಂಗಳೂರು ವೃತ್ತ, ಬೆಂಗಳೂರು; ಶ್ರೀ ಸದಾಶಿವ ರೆಡ್ಡಿ ಬಿ. ಪಾಟೀಲ್, ಹಿಂದಿನ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಸೇರಿದಂತೆ ಇತರೆ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ :**

1. ಲೋಕೋಪಯೋಗಿ ಇಲಾಖೆಯ ಕಡತ ಸಂಖ್ಯೆ: ಲೋಇ 241 ಸೇಇವಿ 2013.
2. ಅಧೀಕ್ಷಕ ಅಭಿಯಂತರರು, ಗುಣ ಭರವಸೆ ವೃತ್ತ ಬೆಂಗಳೂರು ಹಾಗೂ ಪರಿವೀಕ್ಷಣಾ ತಂಡದ ದಿನಾಂಕ: 01/04/2013ರ ತನಿಖಾ ವರದಿ 1 ಮತ್ತು 2.
3. ಕರ್ನಾಟಕ ವಿಧಾನ ಸಭೆಯ ಸದನ ಸಮಿತಿಯ ವರದಿ ದಿನಾಂಕ: 07/06/2013.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಕಡತದಲ್ಲಿ ಲೋಕೋಪಯೋಗಿ ಇಲಾಖೆಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ:– ರಾಮನಗರ ಜಿಲ್ಲೆ, ಮಾಗಡಿ ಲೋಕೋಪಯೋಗಿ ಉಪ ವಿಭಾಗದಲ್ಲಿ 2011–12 ನೇ ಸಾಲಿನಲ್ಲಿ ನಡೆದ ರಸ್ತೆ ಕಾಮಗಾರಿಗಳ ಅಂದಾಜು ತಯಾರಿಕೆ, ಟೆಂಡರ್ ಪ್ರಕ್ರಿಯೆ, ಕಾಮಗಾರಿ ಅನುಷ್ಠಾನ, ಬಿಲ್ ಪಾವತಿಗಳಲ್ಲಿ ವ್ಯಾಪಕ ಅವ್ಯವಹಾರ ನಡೆದಿರುವುದಾಗಿ ಸಾರ್ವಜನಿಕರಿಂದ ದೂರು ದಾಖಲಾದ ಹಿನ್ನೆಲೆಯಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ತನಿಖೆ ಕೈಗೊಂಡು ವರದಿ ಸಲ್ಲಿಸಲು ನೇಮಿಸಿದ ಪರಿವೀಕ್ಷಣಾ ತಂಡದ ದಿನಾಂಕ: 31/08/2012ರ ಪ್ರಾಥಮಿಕ ತನಿಖಾ ವರದಿಯನ್ನು ಸಲ್ಲಿಸಿದ್ದು, ಈ ವರದಿಯನ್ನು ಪರಿಶೀಲಿಸಿ ವಿಸ್ತೃತ ತನಿಖೆ ನಡೆಸಲು ರಚಿಸಲಾದ ಅಧೀಕ್ಷಕ ಅಭಿಯಂತರರು, ಗುಣ ಭರವಸೆ ವೃತ್ತ, ಬೆಂಗಳೂರು ಹಾಗೂ ಪರಿವೀಕ್ಷಣಾ ತಂಡದ ದಿನಾಂಕ: 01/04/2013ರ ತನಿಖಾ ವರದಿ 1 ಮತ್ತು 2ರಲ್ಲಿ ಈ ಪ್ರಕರಣದಲ್ಲಿ ವ್ಯಾಪಕ ಅವ್ಯವಹಾರ ನಡೆದಿರುವುದಾಗಿ ವರದಿ ನೀಡಿದ ಹಿನ್ನೆಲೆಯಲ್ಲಿ, ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸುವಂತೆ ಲೋಕೋಪಯೋಗಿ ಇಲಾಖೆಯ ಪ್ರಸ್ತಾವನೆ ಸಲ್ಲಿಸಿದೆ.

1) ಶ್ರೀ ಸದಾಶಿವ ರೆಡ್ಡಿ ಬಿ. ಪಾಟೀಲ್, ಹಿಂದಿನ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಮುಖ್ಯ–ಇಂಜಿನಿಯರ್, ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು.
2) ಶ್ರೀ ಡಿ. ಉದಯಶಂಕರ್, ಹಿಂದಿನ ಅಧೀಕ್ಷಕ ಇಂಜಿನಿಯರ್, ಮುಖ್ಯ ಇಂಜಿನಿಯರ್, ಕರ್ನಾಟಕ ಆರೋಗ್ಯ ವ್ಯವಸ್ಥೆ ಸುಧಾರಣೆ ಮತ್ತು ಅಭಿವೃದ್ಧಿ ಯೋಜನೆ, ಶೇಷಾದ್ರಿ ರಸ್ತೆ, ಬೆಂಗಳೂರು.
3) ಶ್ರೀ ಆರ್, ಗೋವಿಂದರಾಜು, ಹಿರಿಯ ನಿರ್ದೇಶಕರು (ಆರ್ಥಿಕ) ಹಾಗೂ ಪದ ನಿಮಿತ್ತ ಜಂಟಿ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆಯ (ಪ್ರಸ್ತುತ ಜಂಟಿ ನಿಯಂತ್ರಕರು, ಕರ್ನಾಟಕ ರಾಜ್ಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ, ನಿಯೋಜನೆಯ ಮೇಲೆ ಜಂಟಿ ನಿಯಂತ್ರಕರು (ಹಣಕಾಸು), ಪೊಲೀಸ್ ಮಹಾನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ನಂ:2, ನೃಪತುಂಗ ರಸ್ತೆ, ಬೆಂಗಳೂರು)
4) ಶ್ರೀ ಕಾಂತರಾಜು, ಸಹಾಯಕ ಅಭೀಯಂತರರ, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಮಾಗಡಿ (ಪ್ರಸ್ತುತ ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಉಪವಿಭಾಗ, ಹೊಸಕೋಟೆ)
5) ಶ್ರೀ ಟಿ.ಪಿ. ವೆಂಕಟೇಶ ಮೂರ್ತಿ, ತಾಂತ್ರಿಕ ಸಹಾಯಕರು, ರಾಮನಗರ ಲೋಕೋಪಯೋಗಿ ಇಲಾಖೆ, ರಾಮನಗರ (ಪ್ರಸ್ತುತ ತಾಂತ್ರಿಕ ಸಹಾಯಕರು, ಲೋಕೋಪಯೋಗಿ ವಿಭಾಗ, ತುಮಕೂರು.)
6) ಶ್ರೀ ಕೆ.ಸಿ. ಪ್ರಭಾಕರ್, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಮಾಗಡಿ (ಪ್ರಸ್ತುತ ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಭಟ್ಕಳ.)
7) ಶ್ರೀ ಹೆಚ್.ಬಿ. ಪುಟ್ಟಸ್ವಾಮಿ ಗೌಡ, ಪ್ರಥಮ ದರ್ಜೆ ಸಹಾಯಕರು, ಲೋಕೋಪಯೋಗಿ ವಿಭಾಗ, ರಾಮನಗರ,
8) ಶ್ರೀ ಟಿ.ವಿ. ಮುಕುಂದನ್, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಉಪ ವಿಭಾಗ, ಮಾಗಡಿ (ಪ್ರಸ್ತುತ ಕಿರಿಯ ಇಂಜಿನಿಯರ್, ಬಿ.ಬಿ.ಎಂ.ಪಿ. ಮಲ್ಲೇಶ್ವರಂ ಉಪ ವಿಭಾಗ, ಬೆಂಗಳೂರು.)
9) ಶ್ರೀ ಜಿ. ಕಿಶೋರ್, ದ್ವಿತೀಯ ದರ್ಜೆ ಸಹಾಯಕರು, ಲೋಕೋಪಯೋಗಿ ವಿಭಾಗ, ರಾಮನಗರ.
10) ಶ್ರೀ ಹೆಚ್.ಎಸ್. ವೆಂಕಟೇಶ್, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಉಪ ವಿಭಾಗ, ಮಾಗಡಿ (ಪ್ರಸ್ತುತ ಕಿರಿಯ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿಕ್ಕಬಳ್ಳಾಪುರ.)
11) ಶ್ರೀ ಕೆ.ಎಸ್.ವೆಂಕಟೇಶ್, ಸಹಾಯಕ ಇಂಜಿನಿಯರ್, ರಾಮನಗರ ಲೋಕೋಪಯೋಗಿ ಇಲಾಖೆ, ರಾಮನಗರ. (ಪ್ರಸ್ತುತ ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವೃತ್ತ ಕಛೇರಿ, ಮೈಸೂರು)
12) ಶ್ರೀ ಎ. ನಟರಾಜು, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಮಾಗಡಿ.
13) ಶ್ರೀ ಗಂಗಾಧರಯ್ಯ, ಹಿಂದಿನ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ರಾಮನಗರ (ಪ್ರಸ್ತುತ ನಿವೃತ್ತ)
14) ಶ್ರೀ ಎಂ.ಸಿ. ಶ್ರೀನಿವಾಸ, ಹಿಂದಿನ ಲೆಕ್ಕ ಪರಿಶೋಧನಾಧಿಕಾರಿ, ಲೋಕೋಪಯೋಗಿ ವಿಭಾಗ, ರಾಮನಗರ (ಪ್ರಸ್ತುತ ನಿವೃತ್ತ)
15) ಶ್ರೀ ಜಿ.ಕೆ. ಚಂದ್ರಶೇಖರ್, ಹಿಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ), ಲೋಕೋಪಯೋಗಿ ಉಪ ವಿಭಾಗ, ಮಾಗಡಿ. (ಪ್ರಸ್ತುತ ಮರಣ ಹೊಂದಿರುತ್ತಾರೆ)

ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಲೋಕೋಪಯೋಗಿ ಇಲಾಖೆಯ ಪರಿವೀಕ್ಷಣಾ ತಂಡವು ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆಗೆ ಸಲ್ಲಿಸಿದ ದಿನಾಂಕ: 01/04/2013 ರ ವರದಿಯಲ್ಲಿ ಈ ರಸ್ತೆ ಕಾಮಗಾರಿಗಳಲ್ಲಿ–ಕಾಮಗಾರಿಯನ್ನು ನಿರ್ವಹಿಸಿದೇ ಗುತ್ತಿಗೆದಾರರಿಗೆ ₹. 2672.70 ಲಕ್ಷಗಳನ್ನು ಪಾವತಿಸಿರುವ ಬಗ್ಗೆ, ಕಾಮಗಾರಿ ನಿರ್ವಹಿಸದೇ ಅಳತೆ ಪುಸ್ತಕದಲ್ಲಿ 372 ಕಾಮಗಾರಿಗಳಿಗೆ ಬಿಲ್ ಪಾವತಿ ಮಾಡಲು ಪ್ರಸ್ತಾಪಿಸಿರುವುದು, ಟೆಂಡರ್ ಕರೆಯುವಲ್ಲಿ ನಿಯಮಗಳ ಉಲ್ಲಂಘನೆಯಾಗಿರುವ ಬಗ್ಗೆ ಹಾಗೂ ಇನ್ನೂ ಹಲವಾರು ಗಂಭೀರ ಕರ್ತವ್ಯ ಲೋಪದ ಪ್ರಕರಣಗಳನ್ನು ಬೆಳಕಿಗೆ ತಂದಿರುತ್ತದೆ. ಹಾಗೂ ಸಂಬಂಧಪಟ್ಟ ಅಧಿಕಾರಿ/ನೌಕರರು ಹಾಗೂ ಗುತ್ತಿಗೆದಾರರ ವಿರುದ್ಧ ಕಠಿಣ ಕ್ರಮಕ್ಕೆ ಶಿಫಾರಸ್ಸು ಮಾಡಲಾಗಿದೆ.

ಬೆಳಗಾವಿಯಲ್ಲಿ ಜರುಗಿದ 13ನೇ ವಿಧಾನಸಭೆಯ 15ನೇ ಅಧಿವೇಶನದಲ್ಲಿ ಮಾನ್ಯ ಸಭಾಧ್ಯಕ್ಷರು ಸದರಿ ವಿಷಯದ ಬಗ್ಗೆ ತನಿಖೆ ನಡೆಸಲು ಶ್ರೀ ಅಪ್ಪಾಸಾಹೇಬ್ ಮಲ್ಲಪ್ಪ ಪಟ್ಟಣಶೆಟ್ಟಿ ಇವರ ಅಧ್ಯಕ್ಷತೆಯಲ್ಲಿ 6 ಸದಸ್ಯರ ಸದನ ಸಮಿತಿಯನ್ನು ರಚಿಸಿರುತ್ತಾರೆ. ಈ ಸದನ ಸಮಿತಿಯು ದಿನಾಂಕ:07/06/2013ರಂದು ಸದನದಲ್ಲಿ ವರದಿಯನ್ನು ಮಂಡಿಸಿರುತ್ತದೆ.

ಈ ವರದಿಯಲ್ಲಿ ಕೂಡ ಮಾಗಡಿ ಉಪ ವಿಭಾಗದ ರಸ್ತೆ ಕಾಮಗಾರಿಗಳಲ್ಲಿ ಟೆಂಡರ್ ಪ್ರಕ್ರಿಯೆ, ಅನುದಾನ ಬಿಡುಗಡೆ, ಅನುದಾನ ಹಂಚಿಕೆ, ಕಾಮಗಾರಿಗಳ ತಾಂತ್ರಿಕ ಅನುಮೋದನೆ, ಕಾಮಗಾರಿಗಳ ಅನುಷ್ಠಾನ ಹಾಗೂ ಗುಣಮಟ್ಟ ಮುಂತಾದ ವಿಷಯಗಳಲ್ಲಿ ವ್ಯಾಪಕ ಲೋಪದೋಷಗಳಿದ್ದು ಬಾರಿ ಪ್ರಮಾಣದ ಅವ್ಯವಹಾರ ಹಾಗೂ ಕರ್ತವ್ಯ ಲೋಪ ಮತ್ತು ನೀತಿ ನಿಯಮಗಳ ಉಲ್ಲಂಘನೆ ನಡೆದಿರುವುದನ್ನು ಗಮನಿಸಿದ್ದು, ಈ ಪ್ರಕರಣಗಳಲ್ಲಿ ಭಾಗಿಯಾದ ಎಲ್ಲಾ ಅಧಿಕಾರಿ/ನೌಕರರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲು ಹಾಗೂ ಸರ್ಕಾರಕ್ಕೆ ಉಂಟಾದ ನಷ್ಟವನ್ನು ಸಂಬಂಧಪಟ್ಟವರಿಂದ ವಸೂಲಿ ಮಾಡಲು ಶಿಫಾರಸ್ಸು ಮಾಡಲಾಗಿದೆ.

ಮೇಲೆ ತಿಳಿಸಿದಂತೆ ಲೋಕೋಪಯೋಗಿ ಇಲಾಖೆಯ ಗುಣ ಭರವಸೆ ವೃತ್ತದ ವರದಿ ಹಾಗೂ ಕರ್ನಾಟಕ ವಿಧಾನ ಸಭೆಯ ಸದನ ಸಮಿತಿಯು ಮಾಗಡಿ ಉಪ ವಿಭಾಗದ ರಸ್ತೆ ಕಾಮಗಾರಿಗಳಲ್ಲಿ ಈ ಕೆಳಕಂಡ ನ್ಯೂನತೆಗಳು, ಕರ್ತವ್ಯ ಲೋಪ, ನಿಯಮಗಳ ಉಲ್ಲಂಘನೆ, ವ್ಯಾಪಕ ಅವ್ಯವಹಾರ ಮುಂತಾದ ಅಂಶಗಳನ್ನು ಗಮನಿಸಿದೆ.

1. ಅಂದಾಜು ತಯಾರಿಕೆ ಸಂದರ್ಭದಲ್ಲಿ ರಸ್ತೆಗಳ ವಾಸ್ತವಿಕ ಉದ್ದವನ್ನು ಪರಿಗಣಿಸದೆ ಹೆಚ್ಚುವರಿ ಉದ್ದವನ್ನು ಅಭಿವೃದ್ಧಿಗೆ ಪ್ರಸ್ತಾವಿಸಿ ತಾಂತ್ರಿಕ ಮಂಜೂರಾತಿಯನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದಿರುತ್ತಾರೆ. ಅಲ್ಲದೇ ಲೋಕೋಪಯೋಗಿ ಇಲಾಖೆ ವ್ಯಾಪ್ತಿಗೆ ಹಳ್ಳಿ ರಸ್ತೆಗಳನ್ನು ಕೂಡು ರಸ್ತೆ ರೂಪದಲ್ಲಿ ಸರ್ಕಾರದ ಅನುಮತಿಯಿಲ್ಲದೆ ಅಭಿವೃದ್ಧಿಗೆ ಪ್ರಸ್ತಾಪಿಸಿ ತಾಂತ್ರಿಕ ಮಂಜೂರಾತಿ ಪಡೆದಿರುತ್ತಾರೆ.
2. ಅಭಿವೃದ್ಧಿಗೆ ಪ್ರಸ್ತಾಪಿಸಲಾದ ಕಾಮಗಾರಿಗಳ ಸರಪಳಿ ನಮೂದಿಸದೇ, ಗ್ರಾಮ ಪರಿಮಿತಿ ದೇವಸ್ಥಾನದ ಮುಂಭಾಗ, ಪಂಚಾಯಿತಿ ಕಛೇರಿ ಹತ್ತಿರ ಹೆಸರಿಸಿದ ವ್ಯಕ್ತಿಯ ಮನೆ ಹತ್ತಿರ ಇತ್ಯಾದಿ ಉಪಮೇಯಗಳನ್ನು ಬಳಸಿ ಅಂದಾಜುಗಳನ್ನು ತಯಾರಿಸಲಾಗಿರುತ್ತದೆ.
3. ಉಪವಿಭಾಗದ ನಿರ್ವಹಣೆಗೆ ಒಳಪಡುವ ರಾಜ್ಯ ಹೆದ್ದಾರಿಯ ಪ್ರಾರಂಭಿಕ ಮತ್ತು ಅಂತ್ಯಗೊಳ್ಳುವ ಸರಪಳಿಯು ಉಪವಿಭಾಗ ದಾಖಲಾತಿಗಳಲ್ಲಿ ದಾಖಲಿಸಿರುವುದು ಕಂಡು ಬಂದಿರುತ್ತದೆ. ಸದರಿ ರಾಜ್ಯ ಹೆದ್ದಾರಿ ಅಂದಾಜುಗಳ ಕಾಮಗಾರಿ ಶೀರ್ಷಿಕೆಯಲ್ಲಿ ಅಭಿವೃದ್ಧಿಗೆ ಪರಿಗಣಿಸಿರುವ ರಸ್ತೆಯ ಪ್ರಾರಂಭಿಕ ಸರಪಳಿ ಮತ್ತು ಅಂತ್ಯಗೊಳ್ಳುವ ಸರಪಳಿಯೊಂದಿಗೆ ದಾಖಲಿಸಿದ್ದು, ಅದರಂತೆ ಮಾಗಡಿ ಉಪವಿಭಾಗದ ವ್ಯಾಪ್ತಿಗೆ ಒಳಪಡುವ ರಸ್ತೆ, ರಾಮನಗರ ಉಪವಿಭಾಗ ವ್ಯಾಪ್ತಿಗೆ ಒಳಪಡುವ ರಸ್ತೆಯ ಭಾಗಗಳನ್ನು ಸರಪಳಿ ಅಂದಾಜುಗಳಿಗೆ ತಾಂತ್ರಿಕ ಮಂಜೂರಾತಿ ಪಡೆದು, ಕಾರ್ಯಾದೇಶ ನೀಡಿರುವುದನ್ನು ಗಮನಿಸಲಾಗಿದೆ.
4. ಅಂದಾಜು ತಯಾರಿಕೆ ಪೂರ್ವದಲ್ಲಿ ಶಾಖಾಧಿಕಾರಿಗಳು ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ರಸ್ತೆ ಪರಿವೀಕ್ಷಣೆ ನಡೆಸಿ, ವಾಸ್ತವಿಕ ಸ್ಥಿತಿ ಪರಿಗಣಿಸಿ MORTH ನಿಯಮಗಳಂತೆ ವಿನ್ಯಾಸಿಸಿ Reconstruction, Renewal, Widening ಕಾಮಗಾರಿಗಳಿಗೆ ಸೂಕ್ತ ವಿಶಿಷ್ಟ ವಿವರಣೆಗಳನ್ನು ಅಳವಡಿಸಿ ಅಂದಾಜು ತಯಾರಿಸುವುದು ಆದ್ಯ ಕರ್ತವ್ಯವಾಗಿರುತ್ತದೆ. ಹಾಗೂ ಅಂದಾಜಿನ ವರದಿಯಲ್ಲಿ ಮೇಲಿನಂತೆ ಧೃಢೀಕರಿಸಬೇಕಿರುತ್ತದೆ. ಆದರೆ ಅಂದಾಜುಗಳನ್ನು ಪರಿಶೀಲಿಸಿದಾಗ ಮೇಲಿನಂತೆ ಕ್ರಮವಹಿಸದೇ ಇರುವುದನ್ನು ಗಮನಿಸಿದೆ, ಸಕ್ಷಮ ಪ್ರಾಧಿಕಾರವು ತಾಂತ್ರಿಕ ಮಂಜೂರಾತಿ ನೀಡಲಾಗಿ ವಿಧಿಸಿರುವ ನಿಬಂಧನೆ: ಷರತ್ತುಗಳನ್ನು ಅನುಷ್ಠಾನಾಧಿಕಾರಿಗಳು ಪಾಲಿಸಿರುವುದಿಲ್ಲ.
5. ಬಾರ್ ಚಾರ್ಟ್ ತಯಾರಿಸಿ, ರಸ್ತೆಯ ಸರಪಳಿವಾರು ಸ್ಥಿತಿ, ಈ ಹಿಂದೆ, ವಿವಿಧ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ನಿರ್ವಹಿಸಿ ತಯಾರಿಸಿ defect liability period ಗೆ ಒಳಪಡುವ ರಸ್ತೆಯ ಭಾಗ, 2010–11ರ ಸಾಲಿನಲ್ಲಿ ನಿರ್ವಹಿಸಲಾದ ರಸ್ತೆಯ ಭಾಗ, ಸುಸ್ಥಿತಿಯಲ್ಲಿರುವ ರಸ್ತೆಯ ಭಾಗ, ಇತರೇ ಇಲಾಖೆಗೆ ಹಸ್ತಾಂತರಿಸಿದ ರಸ್ತೆಯ ಭಾಗಗಳನ್ನು ದಾಖಲಿಸಿರುವುದಿಲ್ಲ.
6. ತಾಂತ್ರಿಕ ಮಂಜೂರಾತಿಯಿಂದ ಕಾಮಗಾರಿಗಳಿಗೆ ವಿಭಾಗ ಮಟ್ಟದಲ್ಲಿ ಟೆಂಡರ್ ಪ್ರಕಟಣೆ ಹೊರಡಿಸಿ ಮಾನವಾಧಾರಿತ ಪದ್ಧತಿಯಲ್ಲಿ ಇತ್ಯರ್ಥಗೊಳಿಸಲಾಗಿರುತ್ತದೆ.
7. EMD ಸ್ವೀಕೃತಿಯ ಬಗ್ಗೆ ನಿಖರತೆ ಮತ್ತು ದಾಖಲೆ ಇರುವುದಿಲ್ಲ. ಅಲ್ಲದೆ ಬಹಳಷ್ಟು ಕಾಮಗಾರಿಗಳ ಅಲ್ಪಾವಧಿ ಟೆಂಡರ್ ಪ್ರಕಟಣೆಗೆ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದಿರುವುದಿಲ್ಲ. ಮುಂದುವರೆದು ಟೆಂಡರ್ ಪ್ರಕಟಣೆ ದಿನಪತ್ರಿಕೆಗಳಲ್ಲಿ ಪ್ರಕಟಣೆಯಾಗಿದ್ದರೂ ಸಹ ಬೆಂಗಳೂರು ರಾಮನಗರ ಆವೃತ್ತಿಗಳಲ್ಲಿ ಪ್ರಕಟಿಸದೇ ಕಲಬುರಗಿ ಹುಬ್ಬಳ್ಳಿ, ಬೆಳಗಾವಿ, ಹಾಗೂ ಇನ್ನಿತರೇ ಆವೃತ್ತಿಗಳಲ್ಲಿ ಪ್ರಕಟಣೆಯಾಗಿರುತ್ತದೆ.
8. KTPP ನಿಯಮಾವಳಿಗಳನ್ವಯ ಹಾಗೂ ಇಲಾಖಾ ನಿಯಮಗಳಂತೆ ಟೆಂಡರ್ ಪ್ರಕಟಣೆಯಾದ ದಿನಾಂಕದಿಂದ ಟೆಂಡರ್ ಫಾರಂ ವಿತರಣೆ ದಿನಾಂಕ ಮತ್ತು ಟೆಂಡರ್ ಸ್ವೀಕೃತಿ ದಿನಾಂಕಕ್ಕೆ ಕನಿಷ್ಠ ಅವಧಿ ನಿಗಧಿಪಡಿಸುವುದು ಕಡ್ಡಾಯವಿರುತ್ತದೆ. ಆದರೆ ಬಹುತೇಕ ಟೆಂಡರ್ ಪ್ರಕಟಣೆಯಲ್ಲಿ ಸದರಿ ನಿಯಮಗಳನ್ನು ಉಲ್ಲಂಘಿಸಲಾಗಿರುತ್ತದೆ. ಟೆಂಡರ್ ಪ್ರಕಟಣೆ ದಿನಾಂಕದ ಮರು ದಿನವೇ ಟೆಂಡರ್ ಫಾರಂ ವಿತರಣೆ, ನಂತರದ ಒಂದು ದಿನದಲ್ಲಿ ಟೆಂಡರ್ ಸ್ವೀಕೃತಿ ದಿನಾಂಕ ನಿಗಧಿಪಡಿಸಿ, ಸ್ಪರ್ಧಾತ್ಮಕ ಟೆಂಡರ್‌ಗೆ ಅವಕಾಶ ಕಲ್ಪಿಸಿರುವುದಿಲ್ಲ. ಸ್ವೀಕೃತಿಯಾದ ಟೆಂಡರುಗಳು ನಿಯಮಾನುಸಾರ ಇಲ್ಲದೇ, ಟೆಂಡರ್ ಮೌಲ್ಯಮಾಪನ ಮಾಡದೇ ನೇರವಾಗಿ Work order ನೀಡಿದೆ.
9. KW-1 Section-2 ITT, A- General Clause-3ರ ಪ್ರಕಾರ ಟೆಂಡರ್ ಮೌಲ್ಯ ಮಾಪನ ಸಂದರ್ಭದಲ್ಲಿ ಗುತ್ತಿಗೆದಾರನ ಟೆಂಡರ್ ಸಾಮರ್ಥ್ಯ AXNX2.5-B ಅಳವಡಿಸಿ ಇತ್ಯರ್ಥಗೊಳಿಸಬೇಕಿರುತ್ತದೆ.

ಇದರಲ್ಲಿ A value–ಕಳೆದ 5 ವರ್ಷಗಳಲ್ಲಿ ಗುತ್ತಿಗೆದಾರನ ಗರಿಷ್ಠ turnover.

N value- ಗುತ್ತಿಗೆ ಅವಧಿ ಮತ್ತು

B value- ಗುತ್ತಿಗೆದಾರರ ಕೈಯಲ್ಲಿರುವ ಕಾಮಗಾರಿಗಳ ಮೌಲ್ಯ (work on hand) ಮೇಲಿನ ವಿವರಗಳನ್ನು ಗುತ್ತಿಗೆದಾರರು ಯಾವುದೇ ಟೆಂಡರ್‌ನಲ್ಲಿ ನೀಡಿರುವುದಿಲ್ಲ. ಇದರಂತೆ, ಟೆಂಡರ್‌ಗಳನ್ನು ಮೌಲ್ಯ ಮಾಪನ ಮಾಡದಿದ್ದರೆ, ಬಹಳಷ್ಟು ಗುತ್ತಿಗೆದಾರರುಗಳು ಸದರಿ ಟೆಂಡರ್ ಪ್ರಕರಣಗಳಲ್ಲಿ ಅನರ್ಹರಾಗುತ್ತಿದ್ದರು.

10. ಕಾಮಗಾರಿಯ ಪರಿವೀಕ್ಷಣಾ ಸಂದರ್ಭದಲ್ಲಿ ಶಾಖಾಧಿಕಾರಿ/ಸಹಾಯಕ ಕಾರ್ಯಪಾಲಕ ಇಂಜನಿಯರ್‌ರವರು ಪ್ರತಿ ಗುತ್ತಿಗೆದಾರನು ಅಂದಾಜಿನಂತೆ ನಿರ್ವಹಿಸಿ ಅಭಿವೃದ್ಧಿಪಡಿಸಿರುವ ರಸ್ತೆ/ಚರಂಡಿ/ರಕ್ಷಣಾ ಗೋಡೆಯ ಕಾಮಗಾರಿ ನಿವೇಶನಗಳನ್ನು ಖಚಿತವಾಗಿ ಗುರುತಿಸುವಲ್ಲಿ ವಿಫಲರಾಗಿರುತ್ತಾರೆ. ನಿರ್ವಹಿಸಿದ ಕಾಮಗಾರಿಗಳನ್ನು ಪರಿಶೀಲಿಸದೇ ವಾಸ್ತವಿಕ ಅಳತೆಗಳನ್ನು ನಿವೇಶನ ಸ್ಥಳದಲ್ಲಿ ತೆಗೆದು ದಾಖಲಿಸದೇ ಕಾರ್ಯಾದೇಶದಲ್ಲಿನ Schedule B ಪರಿಮಾಣ, ದರ ಮತ್ತು ಮೊತ್ತವನ್ನು ಅಳತೆ ಪುಸ್ತಕದಲ್ಲಿ ಯಥಾವತ್ತಾಗಿ ದಾಖಲಿಸಿ ಸಂಬಂಧಿಸಿದ ಅಧಿಕಾರಿಗಳು ಕರ್ತವ್ಯ ಲೋಪವೆಸಗಿರುವುದು ಸ್ಪಷ್ಟವಾಗಿರುತ್ತದೆ.

11. ವಾಸ್ತವಿಕವಾಗಿ ನಿರ್ವಹಿಸದೇ ಇರುವ ಕಾಮಗಾರಿಗಳನ್ನು ನಿರ್ವಹಿಸಿರುವುದಾಗಿ ದಾಖಲಿಸಿರುವ ನೂರಾರು ಪ್ರಕರಣಗಳನ್ನು ಗಮನಿಸಲಾಗಿದೆ. ಅಲ್ಲದೇ ಬಿಲ್ ಪಾವತಿಯಲ್ಲಿಯೂ ಪ್ರತಿ ತಿಂಗಳು ಜೇಷ್ಠತೆಯನ್ನು ಕಾಪಾಡಿಕೊಳ್ಳದೆ ಉಲ್ಲಂಘನೆಯಾಗಿರುತ್ತದೆ.

12. ಹಲವಾರು ಪ್ರಕರಣಗಳಲ್ಲಿ ಅಳತೆ ಪುಸ್ತಕದಲ್ಲಿ ಪಾವತಿಗಾಗಿ ಕಾಮಗಾರಿಗಳ ಅಳತೆಗಳನ್ನು ದಾಖಲಿಸಿ ವಿಭಾಗಕ್ಕೆ ಸಲ್ಲಿಸಿರುವ ಬಿಲ್ಲುಗಳು ಖಜಾನೆಯಿಂದ ಪಾವತಿಯಾಗಿದ್ದರೂ, ಅಳತೆ ಪುಸ್ತಕದಲ್ಲಿ Pass Order ಗೆ ಖಜಾಂಜಿಯಾಗಲಿ ಅಥವಾ ಲೆಕ್ಕ ಅಧೀಕ್ಷಕರಾಗಲಿ ಅಥವಾ ಕಾರ್ಯಪಾಲಕ ಅಭಿಯಂತರರು ಸಹಿ ಮಾಡಿರುವುದಿಲ್ಲ.

13. KW-1, Section-2, F– Award of contact Clause 24.1 ರಂತೆ ಗುತ್ತಿಗೆದಾರರೊಂದಿಗೆ ಕಾರ್ಯಾದೇಶವನ್ನು ನೀಡುವ ಮುನ್ನ ಗುತ್ತಿಗೆ ಮೊತ್ತದ ಮೇಲೆ ಶೇ. 5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಗುತ್ತಿಗೆದಾರರಿಂದ ಪಡೆಯಬೇಕಾಗಿರುತ್ತದೆ. ಈ ಮೊತ್ತವನ್ನು Section 5, Contract Date ರಂತೆ Defects Liabiliy Period ಪೂರ್ಣಗೊಂಡ ನಂತರ ಮರುಪಾವತಿಸಬೇಕಾಗಿರುತ್ತದೆ. ಆದರೆ, ಹಲವಾರು ಪ್ರಕರಣಗಳಲ್ಲಿ ಭದ್ರತಾ ಠೇವಣಿಯನ್ನು ಪಡೆಯದೆ, ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಮುಂದುವರೆಸುತ್ತಾ ಕೆಲವು ಕಾಮಗಾರಿಗಳಿಗೆ ಕಾರ್ಯಾದೇಶವನ್ನು ನೀಡುವ ಮುನ್ನ ಭದ್ರತಾ ಠೇವಣಿ ಪಡೆಯಲಾಗಿದ್ದರೂ Defect Liability Peroiod ಪೂರ್ಣಗೊಳ್ಳುವ ಮುನ್ನವೇ ಮರುಪಾವತಿಸಲಾಗಿರುತ್ತದೆ.

14. ಕೆಲವೊಂದು ಪ್ರಕರಣಗಳಲ್ಲಿ ಒಂದು ಕಾಮಗಾರಿಯನ್ನು ಅಳತೆ ಪುಸ್ತಕದಲ್ಲಿ ಎರಡು ಬಾರಿ ದಾಖಲಿಸಿ, ಎರಡೂ ಬಿಲ್ಲುಗಳಿಗೆ ಹಣ ಪಾವತಿಸಲಾಗಿರುತ್ತದೆ. ಅದಲ್ಲದೆ ಕಾಮಗಾರಿಯು ಒಂದೇ ಬಾರಿ ಅಳತೆ ಪುಸ್ತಕದಲ್ಲಿ ದಾಖಲಿಸಲಾಗಿದ್ದರೂ ವಿಭಾಗದಿಂದ ಅದೇ ಕಾಮಗಾರಿಗೆ ಎರಡು DC ಬಿಲ್ ಮಾಡಿ, ಬೇರೆ ಬೇರೆ ದಿನಾಂಕದಂದು ಹಣ ಪಾವತಿಸಲಾಗಿರುತ್ತದೆ. ಅಲ್ಲದೇ ರಸ್ತೆ ಕಾಮಗಾರಿಗಳ ಗುಣಮಟ್ಟವನ್ನು ಸ್ಥಾನಿಕವಾಗಿ ಗುಣ ಭರವಸೆ ಉಪವಿಭಾಗ ಹಾಗೂ ಗುಣ ಭರವಸೆ ವಿಭಾಗದಿಂದ ಖಾತರಿಪಡಿಸಿಕೊಳ್ಳುವ ವರದಿಯನ್ನು ಪಡೆದಿರುವುದಿಲ್ಲ.

15. ಬಹುತೇಕ ಕಾಮಗಾರಿಗಳನ್ನು ವಿಶಿಷ್ಠ ವಿವರಣೆಯಂತೆ ಹಾಗೂ ನಿಗಧಿತ ಅಳತೆಗೆ ನಿರ್ವಹಿಸದಿದ್ದರೂ, ಕೆಲವೊಂದು ಪ್ರಕರಣಗಳಲ್ಲಿ ನಿರ್ವಹಿಸದೇ ಇದ್ದಾಗ್ಯೂ ಪೂರ್ಣ ಪ್ರಮಾಣಕ್ಕೆ ನಿರ್ವಹಿಸಿರುವುದಾಗಿ ದಾಖಲಿಸಿ ಹಣ ಪಾವತಿಸಲಾಗಿರುತ್ತದೆ. ಮುಂದುವರೆದು, ಪ್ರತಿ ತಿಂಗಳಿನಲ್ಲಿ ವಿವಿಧ ಲೆಕ್ಕ ಶೀರ್ಷಿಕೆಗಳಡಿ ಸ್ವೀಕೃತಿಯಾದ ಹಣ ಭರವಸೆ ಪತ್ರಕ್ಕೆದುರಾಗಿ ಬಾಕಿ ಬಿಲ್‌ಗಳ ಮೊತ್ತವನ್ನು ನಿಯಮಾನುಸಾರ ಜೇಷ್ಠತೆ ಪರಿಗಣಿಸದೇ ಪಾವತಿಸಿ, ಜೇಷ್ಠತೆಯನ್ನು ಸಂಪೂರ್ಣವಾಗಿ ಉಲ್ಲಂಘಿಸಿರುವುದು ಕಂಡು ಬಂದಿರುತ್ತದೆ.

16. ಮಾಗಡಿ ಉಪ ವಿಭಾಗ 114.53 ಕಿಮೀ ರಾಜ್ಯ ಹೆದ್ದಾರಿ ಒಟ್ಟು ಉದ್ದದಲ್ಲಿ ರಾಜ್ಯ ಹೆದ್ದಾರಿ–3ರಲ್ಲಿ 26.83 ಕಿಮೀ ರಸ್ತೆ ಉದ್ದವನ್ನು 2010–11ನೇ ಸಾಲಿನಲ್ಲಿ ಅಭಿವೃದ್ಧಿಗಾಗಿ ಕೆಶಿಫ್ ಸಂಸ್ಥೆಗೆ ಹಸ್ತಾಂತರಿಸಲಾಗಿರುತ್ತದೆ. ಅವುಗಳನ್ನು ಅಭಿವೃದ್ಧಿಪಡಿಸಲು ಕೆಶಿಪ್ ಸಂಸ್ಥೆಯು ಕ್ರಮ ತೆಗೆದುಕೊಂಡಿರುತ್ತದೆ.

17. 2007–08ನೇ ಸಾಲಿನಲ್ಲಿ ಬೆಂಗಳೂರು ಸುತ್ತಮುತ್ತಲಿನ ರಸ್ತೆಗಳಲ್ಲಿನ ವಾಹನ ದಟ್ಟಣೆ ಕಡಿಮೆಗೊಳಿಸುವ ನಿಟ್ಟಿನಲ್ಲಿ ಗುರುತಿಸಲಾದ 46 Package ರಸ್ತೆ ಕಾಮಗಾರಿಗಳ ಅಭಿವೃದ್ಧಿಪಡಿಸುವ ಲೆಕ್ಕ ಶೀರ್ಷಿಕೆಯಡಿ ಮಾಗಡಿ ಉಪವಿಭಾಗ ವ್ಯಾಪ್ತಿಗೆ ಒಳಪಡುವ ಸುಮಾರು 64.7. ಕಿಮೀ ರಸ್ತೆ ಉದ್ದವನ್ನು ರಾಷ್ಟ್ರೀಯ ಹೆದ್ದಾರಿ ಮಾನದಂಡಕ್ಕನುಗುಣವಾಗಿ ಅಭಿವೃದ್ಧಿಗೊಳಿಸಲಾಗಿರುತ್ತದೆ. ಹಾಗೂ ಸದರಿ ರಸ್ತೆಗಳ Defect liability Period ಗುತ್ತಿಗೆ ಕರಾರಿನ್ವಯಯ ದಿನಾಂಕ: 31.03.2011 ರ ಅಂತ್ಯಕ್ಕೆ ಪೂರ್ಣಗೊಂಡಿರುತ್ತದೆ.

ಮೇಲೆ ಹೇಳಲಾದ ಅಧಿಕಾರಿಗಳಲ್ಲಿ ಕ್ರಮಸಂಖ್ಯೆ (13) ರಲ್ಲಿರುವ ಶ್ರೀ ಗಂಗಾಧರಯ್ಯ, ಹಿಂದಿನ ಕಾರ್ಯಪಾಲಕ ಇಂಜಿನಿಯರ್ ಹಾಗೂ ಕ್ರಮ ಸಂಖ್ಯೆ (14) ರಲ್ಲಿರುವ ಶ್ರೀ ಎಂ.ಪಿ. ಶ್ರೀನಿವಾಸ, ಹಿಂದಿನ ಲೆಕ್ಕ ಪರಿಶೋಧನಾಕಾರಿ ಇವರುಗಳು ಈಗಾಗಲೇ ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುವುದರಿಂದ ಇವರುಗಳ ವಿರುದ್ಧ ಕರ್ನಾಟಕ ನಾಗರಿಕ ಸೇವಾ ನಿಯಮ 214 ರನ್ವಯ ಪ್ರತ್ಯೇಕ ಕ್ರಮವಹಿಸುವಂತೆ ಆಡಳಿತ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ತಿಳಿಸಲಾಗಿದೆ.

ಮುಂದುವರೆದು, ಕ್ರಮ ಸಂಖ್ಯೆ (15) ರಲ್ಲಿರುವ ಶ್ರೀ ಬಿ.ಕೆ. ಚಂದ್ರಶೇಖರ್, ಹಿಂದಿನ ಕಿರಿಯ ಇಂಜಿನಿಯರ್ (ಶಾಖಾಧಿಕಾರಿ) ಇವರು ಈಗಾಗಲೇ ಮರಣ ಹೊಂದಿರುವುದಾಗಿ ಲೋಕೋಪಯೋಗಿ ಇಲಾಖೆಯು ತಿಳಿಸಲಾಗಿದೆ. ಅದ್ದರಿಂದ ಇವರಿಂದ ಉಂಟಾದ ನಷ್ಟವನ್ನು ಸದರಿಯವರ ವಾರಸುದಾರರಿಂದ ನ್ಯಾಯಾಲಯದಲ್ಲಿ ಸಿವಿಲ್ ಮೊಕದ್ದಮೆ ಹೂಡುವ ಮೂಲಕ ವಸೂಲಿ ಮಾಡಲು ಕ್ರಮವಹಿಸುವಂತೆ ಲೋಕೋಪಯೋಗಿ ಇಲಾಖೆಗೆ ತಿಳಿಸಲಾಗಿದೆ.

ಆದಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವುದಕ್ಕಾಗಿ ಶ್ರೀ ಡಿ. ಉದಯಶಂಕರ್, ಹಿಂದಿನ ಅಧೀಕ್ಷಕ ಇಂಜಿನಿಯರ್, ಬೆಂಗಳೂರು ವೃತ್ತ, ಬೆಂಗಳೂರು: ಶ್ರೀ ಸದಾಶಿವ ರೆಡ್ಡಿ ಬಿ. ಪಾಟೀಲ್, ಹಿಂದಿನ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಸೇರಿದಂತೆ ಇತರೆ ಅಧಿಕಾರಿ/ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಪರಿಗಣಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 05 ಇಮುವಿ 2014 ಬೆಂಗಳೂರು, ದಿನಾಂಕ: 11/04/2016**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957 ರ ನಿಯಮ 13 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಅಧಿಕಾರಿಗಳ ವಿರುದ್ಧ ರಾಮನಗರ ಜಿಲ್ಲೆ, ಮಾಗಡಿ ಲೋಕೋಪಯೋಗಿ ಉಪ ವಿಭಾಗದಲ್ಲಿ 2011–12 ನೇ ಸಾಲಿನಲ್ಲಿ ನಡೆದ ರಸ್ತೆ ಕಾಮಗಾರಿಗಳ ಅಂದಾಜು ತಯಾರಿಕೆ, ಟೆಂಡರ್ ಪ್ರಕ್ರಿಯೆ, ಕಾಮಗಾರಿ ಅನುಷ್ಠಾನ, ಬಿಲ್ ಪಾವತಿಗಳಲ್ಲಿ ನಡೆಸಿದ ಅವ್ಯವಹಾರದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ.

1) ಶ್ರೀ ಸದಾಶಿವ ರೆಡ್ಡಿ ಬಿ. ಪಾಟೀಲ್, ಮುಖ್ಯ ಇಂಜಿನಿಯರ್, ಕರ್ನಾಟಕ ರಾಜ್ಯ ಪೊಲೀಸ್ ವಸತಿ ಮತ್ತು ಮೂಲಭೂತ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು–25.
2) ಶ್ರೀ ಡಿ. ಉದಯಶಂಕರ್, ಮುಖ್ಯ ಇಂಜಿನಿಯರ್, ಕರ್ನಾಟಕ ಆರೋಗ್ಯ ವ್ಯವಸ್ಥೆ ಸುಧಾರಣೆ ಮತ್ತು ಅಭಿವೃದ್ಧಿ ಯೋಜನೆ, ಶೇಷಾದ್ರಿ ರಸ್ತೆ, ಬೆಂಗಳೂರು.
3) ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ಕರ್ನಾಟಕ ರಾಜ್ಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ. ನಿಯೋಜನೆಯ ಮೇಲೆ ಜಂಟಿ ನಿಯಂತ್ರಕರು (ಹಣಕಾಸು), ಪೊಲೀಸ್ ಮಹಾನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ನಂ: 2, ನೃಪತುಂಗ ರಸ್ತೆ, ಬೆಂಗಳೂರು.
4) ಶ್ರೀ ಕಾಂತರಾಜು, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಉಪವಿಭಾಗ, ಹೊಸಕೋಟೆ.
5) ಶ್ರೀ ಟಿ.ಪಿ. ವೆಂಕಟೇಶ ಮೂರ್ತಿ ತಾಂತ್ರಿಕ ಸಹಾಯಕರು, ಲೋಕೋಪಯೋಗಿ ವಿಭಾಗ, ತುಮಕೂರು.
6) ಶ್ರೀ ಕೆ.ಸಿ. ಪ್ರಭಾಕರ್, ಕಿರಿಯ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಭಟ್ಕಳ.
7) ಶ್ರೀ ಹೆಚ್.ಬಿ. ಪುಟ್ಟಸ್ವಾಮಿ ಗೌಡ, ಪ್ರಥಮ ದರ್ಜೆ ಸಹಾಯಕರು, ಲೋಕೋಪಯೋಗಿ ವಿಭಾಗ, ರಾಮನಗರ.
8) ಶ್ರೀ ಟಿ.ವಿ. ಮುಕುಂದನ್, ಕಿರಿಯ ಇಂಜಿನಿಯರ್, ಬಿ.ಬಿ.ಎಂ.ಪಿ, ಮಲ್ಲೇಶ್ವರಂ ಉಪ ವಿಭಾಗ, ಬೆಂಗಳೂರು.
9) ಶ್ರೀ ಬಿ. ಕಿಶೋರ್, ದ್ವಿತೀಯ ದರ್ಜೆ ಸಹಾಯಕರು, ಲೋಕೋಪಯೋಗಿ ವಿಭಾಗ, ರಾಮನಗರ.
10) ಶ್ರೀ ಹೆಚ್.ಎಸ್. ವೆಂಕಟೇಶ್. ಕಿರಿಯ ಇಂಜಿನಿಯರ್, ಲೋಕೋಪಯೋಗಿ ವಿಭಾಗ ಚಿಕ್ಕಬಳ್ಳಾಪುರ.
11) ಶ್ರೀ ಕೆ.ಎಸ್. ವೆಂಕಟೇಶ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವೃತ್ತ ಕಛೇರಿ, ಮೈಸೂರು.
12) ಶ್ರೀ ಎ. ನಟರಾಜು, ಹಿಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಉಪ ವಿಭಾಗ, ಮಾಗಡಿ.

ಈ ಜಂಟಿ ಇಲಾಖಾ ವಿಚಾರಣೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11- 11ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು. ಈ ಪ್ರಕರಣದಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿದ್ದು, ಮೇಲಿನ ನಿಯಮದ ನಿಯಮ 8(ii) ರಿಂದ 8 (Viii) ರವರೆಗಿನ ಯಾವುದಾದರೂ ಅಥವಾ ಎಲ್ಲಾ ದಂಡನೆಗಳನ್ನು ವಿಧಿಸಲು ಸಕ್ಷಮವಾಗಿರುತ್ತದೆ.

**P.R.309**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಹಾಸ ಗಂ ತಾಳೂಕರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ. (ಸೇವೆಗಳು–6)

## ಸಹಕಾರ ಸಚಿವಾಲಯ

**ವಿಷಯ:** 2016–17ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಿಒ/79/ಸಿಎಲ್ಎಸ್/2015, ಬೆಂಗಳೂರು ದಿನಾಂಕ: 19–03–2015.

**ಪ್ರಸ್ತಾವನೆ :–**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2015–16ನೇ ಸಾಲಿನಲ್ಲಿ ನೋಂದಾಯಿಸಲು ಆದೇಶ ಹೊರಡಿಸಲಾಗಿತ್ತು. 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಯೋಜನೆಯನ್ನು ಮುಂದುವರೆಸಲು ಘೋಷಿಸಲಾಗಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/162/ಸಿಎಲ್ಎಸ್/2015 ಬೆಂಗಳೂರು ದಿನಾಂಕ: 15–04–2016**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2016–17ನೇ ಸಾಲಿನಲ್ಲಿ ಗ್ರಾಮೀಣ ಸಹಕಾರ ಸಂಘದ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರು ನೋಂದಾಯಿಸಲು ಅನುವಾಗುವಂತೆ ಈ ಕೆಳಕಂಡ ಆದೇಶವನ್ನು ಮಾರ್ಗಸೂಚಿಗಳೊಂದಿಗೆ ಹೊರಡಿಸಿದೆ.

**ಮಾರ್ಗಸೂಚಿಗಳು :**

1. ಒಬ್ಬ ವ್ಯಕ್ತಿ ಗ್ರಾಮೀಣ ಸಹಕಾರ ಕೃಷಿ ಪತ್ತಿನ / ಗ್ರಾಮೀಣ ಕೃಷಿಯೇತರ ಸಹಕಾರ ಸಂಘಗಳ, ಗ್ರಾಮೀಣ ವಿವಿದ್ದೋದ್ದೇಶ ಸಹಕಾರ ಸಂಘಗಳ, ಹಾಲು ಉತ್ಪಾದಕರ ಸಹಕಾರ ಸಂಘಗಳ, ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘಗಳ, ಸಹಕಾರಿ ಭೂ ಅಭಿವೃದ್ಧಿ ಬ್ಯಾಂಕುಗಳ, ನಗರ/ ಪಟ್ಟಣದ ಜೊತೆಗೆ ಮಹಾನಗರ ಪಾಲಿಕೆ ವ್ಯಾಪ್ತಿಗೆ ಒಳಪಟ್ಟಿರುವ ಪ್ರದೇಶದಲ್ಲಿನ ಕೃಷಿ ಪತ್ತಿನ ಸಹಕಾರ ಸಂಘಗಳ / ಹಾಲು ಉತ್ಪಾದಕರ ಸಹಕಾರ ಸಂಘಗಳ ಸದಸ್ಯರು ಮಹಾನಗರ ಪಾಲಿಕೆ/ ನಗರ / ಪಟ್ಟಣ ಪ್ರದೇಶದಲ್ಲಿ ವಾಸಿಸುತ್ತಿದ್ದು, ಅವರು ಸದಸ್ಯತ್ವ ಹೊಂದಿರುವ ಸಹಕಾರ ಸಂಘಗಳ ವ್ಯಾಪ್ತಿಯಲ್ಲಿ ಕೃಷಿ

ಜಮೀನು ಹೊಂದಿರುವವರು, ಈಗಾಗಲೇ ಕಳೆದ ಸಾಲುಗಳಲ್ಲಿ ಯೋಜನೆಯಡಿಯಲ್ಲಿ ಸದಸ್ಯತ್ವ ಪಡೆದಿದ್ದಲ್ಲಿ ಪ್ರಸಕ್ತ ಸಾಲಿಗೂ ಸಹ ಅಂತಹವರುಗಳು ಯೋಜನೆಯಡಿಯಲ್ಲಿ ಆಯಾ ಸಹಕಾರ ಸಂಘಗಳಲ್ಲಿ ನವೀಕರಿಸಲು / ನೋಂದಾಯಿಸಲು ಅರ್ಹರಾಗಿರುತ್ತಾರೆ.

2. ತೋಟಗಾರಿಕಾ ಸಹಕಾರ ಸಂಘಗಳ (ಕೃಷಿ / ತೋಟಗಾರಿಕೆ / ಹೈನುಗಾರಿಕೆ ಉತ್ಪನ್ನಗಳ ಸಂಸ್ಕರಣ ಸಹಕಾರ ಸಂಘಗಳೂ ಸೇರಿ), ಕುರಿ ಸಾಕಾಣಿಕೆ ಮತ್ತು ಕುರಿ ಉತ್ಪನ್ನಗಳ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳ, ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಮೀನುಗಾರರ, ಬೀಡಿ ಕಾರ್ಮಿಕರ ಮತ್ತು ನೇಕಾರ ಸಹಕಾರ ಸಂಘಗಳ, ಕುಶಲ ಕರ್ಮಿಗಳ ಸಹಕಾರ ಸಂಘಗಳು, ಗುಡಿ ಕೈಗಾರಿಕಾ ಸಂಘಗಳು.

3. ರಾಜ್ಯದ ಗ್ರಾಮೀಣ ಪ್ರದೇಶದ ಚಲನಚಿತ್ರ ಕಲಾವಿದರುಗಳ, ರಂಗಭೂಮಿ ಕಲಾವಿದರುಗಳ, ಜಾನಪದ ಕಲಾವಿದರುಗಳ ಸಾಂಸ್ಕೃತಿಕ ಅಭಿವೃದ್ಧಿ ಸಹಕಾರ ಸಂಘಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿದ್ದು ಕಾಫಿ ಬೆಳೆಯುವ ಜಿಲ್ಲೆಗಳ ಕಾಫಿ ತೋಟಗಳಲ್ಲಿ ಕೆಲಸ ಮಾಡುತ್ತಿರುವ ಪ್ಲಾಂಟೇಷನ್ ಕಾರ್ಮಿಕರುಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ರಾಜ್ಯದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಕೃಷಿ ಕ್ಷೇತ್ರದಿಂದ ಆಯ್ಕೆಯಾಗಿರುವ ರೈತ ಪ್ರತಿನಿಧಿಗಳು, ಗ್ರಾಮೀಣ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಪತ್ರಕರ್ತರುಗಳು (ಪಟ್ಟಣ ಪ್ರದೇಶದ ಪತ್ರಕರ್ತ ಸದಸ್ಯರನ್ನು ಹೊರತುಪಡಿಸಿ), ರಾಜ್ಯದ ಗ್ರಾಮೀಣ ಪ್ರದೇಶದಲ್ಲಿರುವ ಅಲೆಮಾರಿ, ಅರೆ–ಅಲೆಮಾರಿ ಜನಾಂಗಗಳ ವಿವಿಧೋದ್ದೇಶ ಸಹಕಾರಿ ಸಂಘಗಳ ಹಾಗೂ ಇತರೆ ವಿವಿಧೋದ್ದೇಶ ಸಹಕಾರ ಸಂಘಗಳ ಸದಸ್ಯರು, ಗ್ರಾಮೀಣ ಪ್ರದೇಶದಲ್ಲಿನ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಿರುವ ಲೈಂಗಿಕ ಅಲ್ಪಸಂಖ್ಯಾತರು (ಮಂಗಳ ಮುಖಿಯರು).

4. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವತಿಯಿಂದ ಸಂಘಟಿಸಲ್ಪಟ್ಟಿರುವ ಎಲ್ಲಾ ಗ್ರಾಮೀಣ ಸ್ವ–ಸಹಾಯ ಗುಂಪುಗಳ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರು.

5. ಅವಿಭಕ್ತ ಕುಟುಂಬದ ಯಾವುದೇ ಒಬ್ಬ ಸದಸ್ಯನು /ಸದಸ್ಯಳು ಮೇಲೆ ತಿಳಿಸಿರುವ ಅರ್ಹ ಸಹಕಾರ ಸಂಘದ ಸದಸ್ಯರಾಗಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿ ನೋಂದಾಯಿಸುವ ದಿನಾಂಕಕ್ಕೆ 3 ತಿಂಗಳು ಕಳೆದಿರಬೇಕು. ಸ್ವ–ಸಹಾಯ ಗುಂಪಿನ ಸದಸ್ಯರಾದರೆ ಅಂತಹ ಗುಂಪನ್ನು ಸ್ಥಾಪಿಸಿ 3 ತಿಂಗಳು ಗತಿಸಿರಬೇಕು. ಆ ಕುಟುಂಬದ ಪ್ರತಿಯೊಬ್ಬ ಸದಸ್ಯನೂ ವಾರ್ಷಿಕ ವಂತಿಗೆ ಸಲ್ಲಿಸುವ ಮೂಲಕ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಸೌಲಭ್ಯ ಪಡೆಯಬಹುದು. ಅವಿಭಕ್ತ ಕುಟುಂಬ ಅಂದರೆ ತಂದೆ, ತಾಯಿ, ಗಂಡು ಮಕ್ಕಳು & ಮದುವೆಯಾಗದ ಹೆಣ್ಣು ಮಕ್ಕಳೂ, ಸೊಸೆ, ಮೊಮ್ಮಕ್ಕಳೂ ಸೇರಿ ಎಂದು ಅರ್ಥೈಯಿಸುವುದು.

6. ಮದುವೆಯಾಗಿರುವ ಹೆಣ್ಣು ಮಗಳು ಹಾಗೂ ಅವಳ ಮಕ್ಕಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಕುಟುಂಬದಲ್ಲಿಯೇ ಅಂದರೆ ಪ್ರಧಾನ ಅರ್ಜಿದಾರರ ಕುಟುಂಬದಲ್ಲಿ ವಾಸವಾಗಿದ್ದರೆ, ಅವರ ಪಾಲಿನ ವಂತಿಗೆ ಹಣ ಪಾವತಿಸಿದರೆ ನವೀಕರಣ / ನೋಂದಣಿಗೆ ಹಾಗೂ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಮದುವೆಯಾದ ಹೆಣ್ಣು ಮಗಳು ಪ್ರಧಾನ ಅರ್ಜಿದಾರರ ಜೊತೆ ವಾಸವಾಗಿರದಿದ್ದಲ್ಲಿ ಸದಸ್ಯತ್ವ ಪಡೆಯಲು ಅರ್ಹಳಿರುವುದಿಲ್ಲ. ಆದರೆ ಮದುವೆಯಾಗುವುದಕ್ಕೆ ಮುಂಚೆ ಈ ಸಾಲಿನಲ್ಲಿ ಸದಸ್ಯತ್ವ ಪಡೆದಿದ್ದರೆ ಪ್ರಸಕ್ತ ಸಾಲಿನ ಯೋಜನಾ ಅಂತ್ಯದವರೆಗೆ ಸೌಲತ್ತು ಪಡೆಯಲು ಅರ್ಹರಿರುತ್ತಾಳೆ.

7. 2016–17ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ₹.300/–ಕ್ಕೆ ನಿಗದಿಗೊಳಿಸಲಾಗಿದೆ. ಈ ಯೋಜನೆಯ ಪ್ರಯೋಜನ ಪಡೆಯಲು ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಉದ್ದೇಶಿಸಿದ ಪ್ರತಿಯೊಬ್ಬ ಸದಸ್ಯರಿಗೆ ಕಡ್ಡಾಯವಾಗಿ ₹.300/– ವಂತಿಗೆ ಪಾವತಿ ಮಾಡಬೇಕು. ಈ ಪೈಕಿ ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹಧನವಾಗಿ ಸಹಕಾರ ಸಂಘ/ಸಂಸ್ಥೆಯು ₹.10/–ನ್ನು ಇಟ್ಟುಕೊಂಡು, ಉಳಿದ ₹.290/–ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರಿ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ಖಾತೆಗೆ ಜಮಾ ಮಾಡತಕ್ಕದ್ದು/ವರ್ಗಾಯಿಸತಕ್ಕದ್ದು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ. ಪರಿಶಿಷ್ಠ ಜಾತಿ /ಪರಿಶಿಷ್ಟ ವರ್ಗದವರು ವಾರ್ಷಿಕ ವಂತಿಗೆ ₹.50/ ನ್ನು ಪಾವತಿಸಬೇಕು ಉಳಿದ ₹.250/–ನ್ನು ಸರ್ಕಾರದ ವತಿಯಿಂದ ಸಹಾಯಧನವಾಗಿ ಪಾವತಿಸಲಾಗುವುದು.

8. ಯಾವುದೇ ಒಂದು ಕುಟುಂಬದಲ್ಲಿ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಗೆ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ/ ನವೀಕರಿಸಿದ್ದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ₹.290/– ರಲ್ಲಿ ಶೇ. 15 ರಷ್ಟು ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ ಹಾಗೂ ಪರಿಶಿಷ್ಠ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರಿಗೆ ₹.40/– ರಲ್ಲಿ ಶೇ 15 ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

9. ಯಶಸ್ವಿನಿ ಸದಸ್ಯರಾಗಲು ವಯೋಮಿತಿಯ ನಿರ್ಬಂಧವಿರುವುದಿಲ್ಲ,

10. ನವಜಾತ ಶಿಶುವಿನ ತಾಯಿಯ ಹೆಸರು ಯಶಸ್ವಿನಿ ಕಾರ್ಡ್‌ನಲ್ಲಿದ್ದರೆ 30 ದಿನಗಳವರೆಗೆ ತಾಯಿ ಹೆಸರು ಇರುವ ಯಶಸ್ವಿನಿ ಕಾರ್ಡಿನ ಆಧಾರದ ಮೇಲೆ ಈ ಯೋಜನೆಯಡಿಯಲ್ಲಿ ಬರುವ ಸೌಲಭ್ಯವನ್ನು ಪಡೆಯಬಹುದು. 30 ದಿನಗಳ ನಂತರದಲ್ಲಿ ಮಗುವಿನ ಹೆಸರಿನೊಂದಿಗೆ ಆ ವರ್ಷದಲ್ಲಿ ಯಾವ ಸಂದರ್ಭದಲ್ಲಿಯೂ ನೋಂದಾಯಿಸಿಕೊಂಡು ಯೋಜನೆಯ ಸವಲತ್ತು ಪಡೆಯಬಹುದು.

11. ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯು ಸದಸ್ಯರ ವಂತಿಗೆ ಮತ್ತು ಸರ್ಕಾರದ ಅನುದಾನದಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಯಾಗಿದ್ದು, ಸದಸ್ಯರಿಂದ ಸಂಗ್ರಹಿಸಿದ ವಂತಿಗೆಯ ಮೊತ್ತಕ್ಕಿಂತ ಶಸ್ತ್ರಚಿಕಿತ್ಸಾ ವೆಚ್ಚ ಪ್ರತಿ ವರ್ಷ ಹೆಚ್ಚಿಗೆ ಪಾವತಿಯಾಗುತ್ತಿದೆ. ಯೋಜನೆ ಸಫಲತೆಯ ದೃಷ್ಟಿಯಿಂದ ಹೆಚ್ಚಿನ ಪ್ರಮಾಣದಲ್ಲಿ ಸದಸ್ಯರುಗಳನ್ನು ನೋಂದಾಯಿಸುವುದು ಅವಶ್ಯವಾಗಿದೆ. 2016–17 ನೇ ಸಾಲಿನಲ್ಲಿ ಕನಿಷ್ಠ 50.00 ಲಕ್ಷ ಸದಸ್ಯರುಗಳನ್ನು ನೋಂದಾಯಿಸುವ ಗುರಿ ನಿಗಧಿಪಡಿಸಲಾಗಿದೆ. ಪ್ರತಿ ಜಿಲ್ಲೆಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಸಹಕಾರ ಸಂಘಗಳ ನಿಬಂಧಕರು ಪ್ರತಿ ಜಿಲ್ಲೆಗೆ ಪ್ರತ್ಯೇಕ ಗುರಿ ನಿಗಧಿಗೊಳಿಸುವಂತೆ ಸೂಚಿಸಲಾಗಿದೆ. 2015–16ನೇ ಸಾಲಿನಲ್ಲಿ 39.43 ಲಕ್ಷ ಸದಸ್ಯರನ್ನಾಗಿ ನೋಂದಾಯಿಸಿದವರೆಲ್ಲರನ್ನೂ 2016–17ನೇ ಸಾಲಿಗೆ ನವೀಕರಿಸಲು ಕ್ರಮ ಕೈಗೊಳ್ಳತಕ್ಕದ್ದು.

**12. 2016–17ನೇ ಸಾಲಿಗೆ ಗ್ರಾಮೀಣ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಕಾರ್ಯಕ್ರಮವನ್ನು ಈ ಕೆಳಗಿನಂತೆ ನಿಗದಿಗೊಳಿಸಲಾಗಿದೆ.**

(ಅ) ಯಶಸ್ವಿನಿ ಸದಸ್ಯರ ನೋಂದಣಿ / ನವೀಕರಣ ಪ್ರಾರಂಭದ ದಿನಾಂಕ: 20.04.2016

(ಆ) ಯಶಸ್ವಿನಿ ಸದಸ್ಯರ ನೋಂದಣಿ / ನವೀಕರಣ ಕೊನೆಯ ದಿನಾಂಕ: 31.05.2016.

13. 2016–17ನೇ ಸಾಲಿನಲ್ಲಿ ಯಶಸ್ವಿನಿ ಸದಸ್ಯರುಗಳನ್ನು ಹೊಸದಾಗಿ ನೋಂದಾಯಿಸಲು 2015–16ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಗಾಗಿ ಸರಬರಾಜು ಮಾಡಿರುವ ಹೊಸ ನೋಂದಣಿ ಫಾರಂಗಳನ್ನು ಮಾತ್ರ ಉಪಯೋಗಿಸಬೇಕು ಮತ್ತು ಗುರುತಿನ ಚೀಟಿ ಒದಗಿಸಬೇಕು. ಬೇರೆ ಯಾವುದೇ ವರ್ಷಗಳಲ್ಲಿ ನೀಡಿರುವ ಫಾರಂಗಳನ್ನು ಉಪಯೋಗಿಸತಕ್ಕದ್ದಲ್ಲ.

ಮೊದಲು 2015–16ನೇ ಸಾಲಿನಲ್ಲಿ ಸರಬರಾಜಿನಲ್ಲಿ ಉಳಿದ ಫಾರಂಗಳನ್ನು ಉಪಯೋಗಿಸಬೇಕು, ಅನಂತರ ಟ್ರಸ್ಟ್‌ನಿಂದ 2016–17ನೇ ಸಾಲಿಗೆ ಸರಬರಾಜು ಮಾಡಿದ ನೋಂದಣಿ ಫಾರಂಗಳನ್ನು ಉಪಯೋಗಿಸಬೇಕು. ಹಳೇ ಫಾರಂಗಳನ್ನು ಉಪಯೋಗಿಸುವಾಗ ಈ ವರ್ಷದ ವಾರ್ಷಿಕ ವಂತಿಕೆಯನ್ನು ಹಳೆ ನೋಂದಣಿ ಫಾರಂನ ಎರಡು ಭಾಗಗಳಲ್ಲಿ ತಿದ್ದುಪಡಿ ಮಾಡಿ ಸಹಕಾರ ಸಂಘಗಳ ಕಾರ್ಯದರ್ಶಿಗಳು ಸಹಿ ಮಾಡಬೇಕು. ಈ ವರ್ಷದ ನೋಂದಣಿಗೆ ಬೇಕಾದ ಅವಶ್ಯಕ ಸಂಖ್ಯೆಯ ಫಾರಂಗಳನ್ನು ಜಿಲ್ಲೆಗಳ ಸಹಕಾರ ಸಂಘಗಳ ಉಪನಿಬಂಧಕರುಗಳು ಟ್ರಸ್ಟ್ ಕಛೇರಿಯಿಂದ ಪಡೆದು ಅವರ ವ್ಯಾಪ್ತಿಯ ಸಹಕಾರ ಸಂಘಗಳ ಕಾರ್ಯದರ್ಶಿಗಳಿಗೆ ಫಾರಂ/ಪುಸ್ತಕಗಳನ್ನು ಹಂತಹಂತವಾಗಿ ಪೂರೈಸಿ ಸ್ವೀಕೃತಿ ಪಡೆಯಬೇಕು. ಒಮ್ಮೆ ಪೂರೈಸಿದ ಫಾರಂಗಳಲ್ಲಿ ಸಹಕಾರ ಸಂಘದವರು ಮಾಹಿತಿಯನ್ನು ಪೂರ್ತಿಯಾಗಿ ನಮೂದಿಸಿ ವಂತಿಗೆ ಹಣವನ್ನು ಬ್ಯಾಂಕಿಗೆ ಪಾವತಿ ಮಾಡಿದ ನಂತರವೇ ಪುನಃ ಫಾರಂಗಳನ್ನು ಒದಗಿಸಬೇಕು. ಸಹಕಾರ ಸಂಘಕ್ಕೆ ಫಾರಂ ಪೂರೈಸುವಾಗ ಪುಸ್ತಕದ ಸಂಖ್ಯೆ ಮತ್ತು ಯುನಿಕ್ ಐ.ಡಿ ಸಂಖ್ಯೆಯನ್ನು ನಮೂದಿಸಿ ಕಾರ್ಯದರ್ಶಿಯಿಂದ ಸ್ವೀಕೃತಿ ಪಡೆದುಕೊಳ್ಳಬೇಕು. ಈ ಬಗ್ಗೆ ಪರಿಶೀಲನೆಗಾಗಿ ಪ್ರತ್ಯೇಕ ಪುಸ್ತಕದಲ್ಲಿ ಬರೆದಿಟ್ಟಿರಬೇಕು. ನವೀಕರಣಕ್ಕಾಗಿ ವೆಬ್‌ಸೈಟ್‌ನಲ್ಲಿರುವ ಫಾರಂನ್ನು ಉಪಯೋಗಿಸಬೇಕು. ನವೀಕರಿಸಿದವರಿಗೆ ಹೊಸದಾಗಿ ಐಡಿ ಕಾರ್ಡ್ ಕೊಡತಕ್ಕದ್ದಲ್ಲ, ಅವರಿಗೆ ಹಣ ಪಾವತಿಸಿದ್ದಕ್ಕೆ ರಶೀದಿ ಕೊಟ್ಟು, ರಶೀದಿಯಲ್ಲಿ ಈಗಾಗಲೇ ಕೊಟ್ಟಿರುವ ಕಾರ್ಡ್‌ನ ಯುನಿಕ್ ಐಡಿ ನಂಬರನ್ನು ನಮೂದಿಸಬೇಕು. ಸಹಕಾರ ಸಂಘಗಳ ಕಾರ್ಯದರ್ಶಿಗಳು ನವೀಕರಣಕ್ಕಾಗಿ ಭರ್ತಿ ಮಾಡಿದ ಮತ್ತು ಹೊಸದಾಗಿ ನೋಂದಾಯಿಸಲು ಭರ್ತಿ ಮಾಡಿದ ಫಾರಂಗಳ ಕಛೇರಿ ಪ್ರತಿಯನ್ನು ಡಾಟಾ ಎಂಟ್ರಿಗೆ ಕಳುಹಿಸಬೇಕು.

14 ಅರ್ಹ ಸಹಕಾರ ಸಂಘಗಳು ಸದಸ್ಯರುಗಳಿಂದ ನಿಗಧಿತ ವಾರ್ಷಿಕ ವಂತಿಗೆ ಹಣ ಪಡೆದು ಹಣ ಸ್ವೀಕೃತಿ ರಶೀದಿಯನ್ನು ಕೊಡಬೇಕು. ಫಾರಂನಲ್ಲಿ ಸದಸ್ಯರನ್ನು ನೋಂದಾಯಿಸಿದ ತಿಂಗಳು, ವರ್ಷ ಮತ್ತು ದಿನಾಂಕವನ್ನು ತಪ್ಪದೆ ನಮೂದಿಸಬೇಕು. ನೋಂದಾವಣೆ ಫಾರಂನ ಕೆಳಭಾಗವನ್ನು ಸದಸ್ಯರಿಗೆ ಕೊಡಬೇಕು. ಮೇಲ್ಭಾಗವನ್ನು ಡಾಟಾ ಎಂಟ್ರಿ ಮಾಡಲು ಸಂಬಂಧಿಸಿದ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರಿಗೆ ಪ್ರತಿ ತಿಂಗಳ ಕೊನೆಯಲ್ಲಿ ಸಂಗ್ರಹಿಸಿದ ವಂತಿಗೆಯ ಹಣವನ್ನು ಬ್ಯಾಂಕಿಗೆ ಜಮೆ ಮಾಡಿ ರಶೀದಿಯೊಂದಿಗೆ ಕಳುಹಿಸಬೇಕು ಮತ್ತು ಆಗಿಂದಾಗ್ಗೆ ಡಾಟಾ ಎಂಟ್ರಿ ಮಾಡಲು ಅನುಕೂಲವಾಗುವಂತೆ ಪ್ರತಿ ತಿಂಗಳ ಕೊನೆಯಲ್ಲಿ ಹೊಸ ನೋಂದಾವಣೆ ಅರ್ಜಿ / ನವೀಕರಣದ ವಿವರಗಳನ್ನು ಅಂದರೆ ಹೊಸ ಅರ್ಜಿಗಳಲ್ಲಿ ಸದಸ್ಯರುಗಳ ಪೋಟೋ ಅಂಟಿಸಿ, ಎಲ್ಲಾ ವಿವರಗಳೊಂದಿಗೆ ಹೊಸದಾಗಿ ನೋಂದಾಯಿಸಿದ ಮತ್ತು ನವೀಕರಣವಾದ ಸದಸ್ಯರುಗಳ ತಃಖ್ತೆಯೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಿ ಸ್ವೀಕೃತಿ ಪಡೆಯಬೇಕು.

15 2016–17 ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸುವವರಿಗೆ ಹೊಸ ಕಾರ್ಡುಗಳನ್ನು ಕೊಡಲಾಗುವುದು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರ ಎರಡು ಭಾವಚಿತ್ರಗಳನ್ನು ತಂದು ಕಛೇರಿ ಪ್ರತಿ ಮತ್ತು ಸದಸ್ಯರ ಪ್ರತಿಯ ಹಿಂಭಾಗದಲ್ಲಿ ಅರ್ಜಿ ಫಾರಂನಲ್ಲಿ ಕ್ರಮ ಸಂಖ್ಯೆ ಅನುಗುಣವಾಗಿ ಪೋಟೋಗಳನ್ನು ಅಂಟಿಸಿ ಭಾವಚಿತ್ರದ ಕೆಳಗೆ ಅವರ ಹೆಸರನ್ನು ಬರೆಯಬೇಕು.

16 ಈಗಾಗಲೇ ಕಾರ್ಡ್ ಹೊಂದಿರುವವರು ನವೀಕರಣ ಸಂದರ್ಭದಲ್ಲಿ ವಂತಿಗೆ ತುಂಬಿ ಹೊಸದಾಗಿ ಸದಸ್ಯರನ್ನು ಸೇರಿಸಲು ಬಯಸಿದ್ದಲ್ಲಿ, ಪ್ರಧಾನ ಅರ್ಜಿದಾರರಿಗೆ ನೀಡಿರುವ ಕಾರ್ಡಿನಲ್ಲಿ ಹೊಸ ವ್ಯಕ್ತಿಯ ಮಾಹಿತಿಯನ್ನು ಮುಖಪುಟದಲ್ಲಿ ಬರೆದು ಹಿಂಬದಿಯಲ್ಲಿ ಪೋಟೋ ಅಂಟಿಸಬೇಕು ಹಾಗೂ ಆ್ಯಡ್–ಆನ್ ಕಾರ್ಡ್‌ನಲ್ಲಿ ಹೊಸದಾಗಿ ಸೇರ್ಪಡೆಗೊಂಡ ವ್ಯಕ್ತಿಯ ಮಾಹಿತಿಯನ್ನು ಮುಖಪುಟದಲ್ಲಿ ಬರೆದು ಹಿಂಬದಿಯಲ್ಲಿ ಪೋಟೋ ಅಂಟಿಸಬೇಕು ಮತ್ತು ಆ ಆ್ಯಡ್–ಆನ್ ಕಾರ್ಡ್‌ನ್ನು ಡಾಟಾ ಎಂಟ್ರಿಗೆ ಸಲ್ಲಿಸತಕ್ಕದ್ದು.

17. 2016–17ನೇ ಸಾಲಿನಲ್ಲಿ ಹೊಸದಾಗಿ ನೋಂದಾವಣೆ/ನವೀಕರಣಗೊಂಡ/ಸೇರ್ಪಡೆಯಾದ ಸದಸ್ಯರುಗಳಿಗೆ ಸಂಘವು ವಾರ್ಷಿಕ ವಂತಿಗೆ ಹಣ ಪಡೆದು ನೀಡಿರುವ ಸ್ವೀಕೃತಿ ರಶೀದಿಯನ್ನು ಮತ್ತು ನೋಂದಣಿ ಫಾರಂ (ಐ.ಡಿ) ಕಾರ್ಡ್ ಸದಸ್ಯರು 2016–17ನೇ ಸಾಲಿನ ಅಂತ್ಯದವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು ಮತ್ತು ಯೋಜನೆಯ ಸೌಲಭ್ಯವನ್ನು ಪಡೆಯುವ ಸಂದರ್ಭದಲ್ಲಿ ರಶೀದಿಯನ್ನು ಟ್ರಸ್ಟ್‌ನಿಂದ ಅಂಗೀಕರಿಸಲ್ಪಟ್ಟ ಆಸ್ಪತ್ರೆಗಳಿಗೆ ಕಡ್ಡಾಯವಾಗಿ ಹಾಜರುಪಡಿಸಬೇಕು ಎಂಬ ತಿಳವಳಿಕೆಯನ್ನು ಸಂಘವು ನೊಂದಾಯಿತ ಸದಸ್ಯರಿಗೆ ತಿಳಿಸತಕ್ಕದ್ದು.

18 ಹಿಂದಿನ ವರ್ಷಗಳಲ್ಲಿ ನೊಂದಾಯಿಸಿದ್ದ ಎಲ್ಲಾ ಯಶಸ್ವಿನಿ ಸದಸ್ಯರಿಗೂ ಯೂನಿಕ್ ಐಡಿ ನೀಡಿ ಮಾಹಿತಿಯನ್ನು ಯಶಸ್ವಿನಿ ವೆಬ್‌ಸೈಟ್ WWW. Yeshasvini.Kar.nic.inನಲ್ಲಿ ಅಳವಡಿಸಲಾಗಿದೆ. ಯಾವುದೇ ಕಾರಣದಿಂದ ಹಿಂದಿನ ವರ್ಷಗಳಲ್ಲಿ ನೊಂದಾಯಿಸಿಕೊಂಡ ಸದಸ್ಯರು ನವೀಕರಿಸಿಕೊಂಡದಿದ್ದಲ್ಲಿ ಅಂತಹವರು ಈ ವರ್ಷ ಹೊಸದಾಗಿ ಕಾರ್ಡ್ ಪಡೆಯಬಹುದು.

19. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಎಲ್ಲಾ ಸಾಲಗಾರರನ್ನು ಮನವೊಲಿಸಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರನ್ನಾಗಿ ಮಾಡುತ್ತಿವೆ. ಇದೇ ರೀತಿ ಉಳಿದ ಎಲ್ಲಾ ಜಿಲ್ಲಾ ಕೇಂದ್ರ ಬ್ಯಾಂಕುಗಳು, ಗ್ರಾಮೀಣ ಸಹಕಾರ ಸಂಘಗಳು ಮತ್ತು ಪಿಕಾರ್ಡ್ ಬ್ಯಾಂಕುಗಳು ಸಹ ತಮ್ಮ ಸಾಲಗಾರರ ಮನವೊಲಿಸಿ ಸಾಲಗಾರರು ಮತ್ತು ಅವರ ಕುಟುಂಬದ ಇತರೆ ಎಲ್ಲಾ ಸದಸ್ಯರನ್ನು ಈ ಯೋಜನೆಯಡಿಯಲ್ಲಿ ನೋಂದಾಯಿಸಲು ಕ್ರಮ ಕೈಗೊಳ್ಳಲು ತಿಳಿಸಿದೆ.

20. ಹಾಲು ಉತ್ಪಾದಕರ ಸಹಕಾರ ಸಂಘಗಳು, ಸಹಕಾರಿ ಸಕ್ಕರೆ ಕಾರ್ಖಾನೆಗಳು, ಸಹಕಾರಿ ನೂಲಿನ ಗಿರಣಿಗಳು ಇತ್ಯಾದಿ ಸಹಕಾರಿ ಸಂಘಗಳು ಅವರ ಸದಸ್ಯರಿಗೆ ಹಣ ಪಾವತಿ ಮಾಡುವಾಗ ಅಂತಹ ಸದಸ್ಯರ ಕುಟುಂಬದ ಅರ್ಹ ವ್ಯಕ್ತಿಗಳನ್ನು ಮನವೊಲಿಸಿ ಸದಸ್ಯರನ್ನಾಗಿ ನೋಂದಣಿ ಮಾಡಬೇಕು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಯಾವುದೇ ಸದಸ್ಯನು ಸರ್ಕಾರಿ ನೌಕರನಾಗಿ ಅಥವಾ ಖಾಸಗಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಬೇರೆ ಯಾವುದೇ ಆರೋಗ್ಯ ವಿಮಾ ಯೋಜನೆಯ ಸೌಲಭ್ಯಕ್ಕೆ ಅರ್ಹನಾಗಿದ್ದಲ್ಲಿ, ಅಂತಹವರನ್ನು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಫಲಾನುಭವಿಯಾಗಿ ನೋಂದಾಯಿಸಬಾರದು. ಆದಾಗ್ಯೂ ಯಾವುದೇ ಕಾರಣಕ್ಕಾಗಿ ನೋಂದಾಯಿಸಿದರೂ ಅವರು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ.

21. ರಾಜ್ಯದಲ್ಲಿ ಕೆಲವು ಹಾಲು ಉತ್ಪಾದಕರ ಒಕ್ಕೂಟಗಳು ಮತ್ತು ಕೆಲವು ಸಹಕಾರ ಸಂಘ/ಸಂಸ್ಥೆಗಳು ಅವುಗಳ ಸದಸ್ಯರ ಯಶಸ್ವಿನಿ ವಂತಿಗೆಯಲ್ಲಿ ಭಾಗಶಃ ಹಣವನ್ನು ಸಹಕಾರ ಸಂಘದ ಸ್ವಂತ ಬಂಡವಾಳದಿಂದ ಭರಿಸುತ್ತಿದೆ. ಈ ಪದ್ಧತಿಯನ್ನು ರಾಜ್ಯದ ಎಲ್ಲಾ ಸಹಕಾರ ಸಂಘ ಸಂಸ್ಥೆಗಳೂ ಕೂಡ ಅನುಸರಿಸುವಂತೆ ಪ್ರೋತ್ಸಾಹಿಸಲು ಸೂಚಿಸಲಾಗಿದೆ.

22. 2016–17ನೇ ಸಾಲಿನಲ್ಲಿ ಹೊಸದಾಗಿ/ನವೀಕರಣ ಮಾಡಿಕೊಳ್ಳುವ ಸದಸ್ಯರುಗಳು ಸುಳ್ಳು ಮಾಹಿತಿ ಮತ್ತು ಅಕ್ರಮವಾಗಿ ಸದಸ್ಯರ ಅಥವಾ ಸಹಕಾರ ಸಂಘಗಳ ತಪ್ಪಿನಿಂದಾಗಿ ಆಗಿದ್ದರೆ ಗೊತ್ತಿದ್ದು ಅಥವಾ ಗೊತ್ತಿಲ್ಲದೆಯೋ ನೋಂದಣಿ ಹೊಂದಿದ್ದರೆ ಅಂತಹ ವ್ಯಕ್ತಿಗಳು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಲು ಅನರ್ಹರು ಹಾಗೂ ಪಾವತಿಸಿದ ವಂತಿಗೆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೆಯೇ ಅಂತಹ ಫಲಾನುಭವಿಗಳ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಸದಸ್ಯತ್ವ ತಂತಾನೇ ರದ್ದುಗೊಳ್ಳುತ್ತದೆ. ಪ್ರತ್ಯೇಕ ರದ್ದತಿ ಆದೇಶದ ಅವಶ್ಯಕತೆ ಇರುವುದಿಲ್ಲ.

23. ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿನ ಮಾಹಿತಿಯನ್ನೊಳಗೊಂಡ ಬ್ರೋಚರ್‌ಗಳನ್ನು ಸಹಕಾರ ಸಂಘಗಳು 2016–17ನೇ ಸಾಲಿಗೆ ಯೋಜನೆಯಡಿಯಲ್ಲಿ ಹೊಸದಾಗಿ ನೋಂದಾಯಿಸುವ/ನವೀಕರಣಗೊಳ್ಳುವ ಫಲಾನುಭವಿಗಳ ಯಶಸ್ವಿನಿ ಕಾರ್ಡ್ ಹೊಂದಿರುವ ಪ್ರಧಾನ ಅರ್ಜಿದಾರರಿಗೆ ಕೊಡತಕ್ಕದ್ದು.

24. ಈ ಕೆಳಕಂಡಂತೆ ಸೌಲಭ್ಯಗಳನ್ನು ಯಶಸ್ವಿನಿ ಸದಸ್ಯರಿಗೆ ಒದಗಿಸಲಾಗುವುದು.

A. ವಾರ್ಡ್‌ಗಳ ಸೌಲಭ್ಯ: ಜನರಲ್ ವಾರ್ಡ್‌ನ ಸೌಲಭ್ಯದಲ್ಲಿ ಯಶಸ್ವಿನಿ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಅನುಮತಿಸಿದ 823 ಶಸ್ತ್ರ ಚಿಕಿತ್ಸೆಗಳನ್ನು ಒದಗಿಸಲಾಗುವುದು. ಯಶಸ್ವಿನಿ ಸದಸ್ಯರು ಸ್ಪೆಷಲ್ ವಾರ್ಡ್‌ನಲ್ಲಿ ಚಿಕಿತ್ಸೆ ಪಡೆಯಲು ಇಚ್ಛಿಸಿದರೆ ಅಂತಹ ಸದಸ್ಯರು ಸ್ಪೆಷಲ್ ವಾರ್ಡ್‌ನಲ್ಲಿ ಚಿಕಿತ್ಸೆಗೆ ಯಶಸ್ವಿನಿ ಟ್ರಸ್ಟ್ ನಿಗದಿಪಡಿಸುವ ವೆಚ್ಚವನ್ನು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಿಂದ ಆಸ್ಪತ್ರೆಗೆ ದೊರಕುವ ಚಿಕಿತ್ಸಾ ವೆಚ್ಚವನ್ನು ಕಳೆದು ಉಳಿದ ಮೊತ್ತವನ್ನು ಪಾವತಿಸಬೇಕು.

B. ರಿಯಾಯಿತಿ ದರದ ಹೊರರೋಗಿ ಚಿಕಿತ್ಸೆ: 2016–17ನೇ ಸಾಲಿನಲ್ಲಿಯೂ ಸಹ ರಿಯಾಯಿತಿ ದರದಲ್ಲಿ ಅಂದರೆ ₹.100/– ಸಾಮಾನ್ಯ ಹೊರರೋಗಿ ತಪಾಸಣೆಗೆ ಯಶಸ್ವಿನಿ ಸದಸ್ಯರು ಪಾವತಿಸಬೇಕು. ವಿಶೇಷ ಹೊರರೋಗಿ ತಪಾಸಣೆಗೆ ₹. 200/– ಪಾವತಿಸಬೇಕು ಮತ್ತು ಅವರು ತಪಾಸಣೆಗಾಗಿ ಪಾವತಿಸಿದ ರಶೀತಿಯ ಮೇಲೆ 3 ತಿಂಗಳವರೆಗೆ ಮೇಲೆ ಹೇಳಿದ ಹೊರರೋಗಿ ಚಿಕಿತ್ಸೆಗಳನ್ನು ಉಚಿತವಾಗಿ ಪಡೆಯಬಹುದು.

C. ಕ್ಲೀನಿಕಲ್ ಇನ್ವೆಸ್ಟಿಗೇಷನ್ : 2016–17ನೇ ಸಾಲಿನಲ್ಲಿಯೂ ಯಶಸ್ವಿನಿ ಸದಸ್ಯರು ಶೇ.25 ರಿಯಾಯಿತಿ ದರದಲ್ಲಿ ನೆಟ್‌ವರ್ಕ್ ಆಸ್ಪತೆಗಳಲ್ಲಿ ಕ್ಲಿನಿಕಲ್ ಮತ್ತು ಇತರೆ ತಪಾಸಣೆಗಳನ್ನು (Clinical & other Investigation) ಪಡೆಯಬಹುದು.

D. ಗರಿಷ್ಠ ಮೊತ್ತದ ಚಿಕಿತ್ಸೆ : ಆಯಾ ವರ್ಷದಲ್ಲಿ ಒಂದು ಬಾರಿ ದಾಖಲಾದರೆ ₹.1.25 ಲಕ್ಷಗಳು ಮತ್ತು ಅದೇ ವರ್ಷ ಅನೇಕ ಸಾರಿ ಆಸ್ಪತ್ರೆಗೆ ದಾಖಲಾದರೆ ರೂ. 2.00 ಲಕ್ಷಗಳು.

25. ಈ ಬಗ್ಗೆ ಮಾಹಿತಿ ಇರುವ ಬ್ರೋಚರ್‌ಗಳನ್ನು ಪ್ರಧಾನ ಅರ್ಜಿದಾರರಿಗೆ ನೀಡಿ, ಬ್ರೋಚರನ್ನು ಸ್ವೀಕರಿಸಿರುವ ಬಗ್ಗೆ ಸ್ವೀಕೃತಿಯನ್ನು ಪಡೆದು ಸಹಕಾರ ಸಂಘಗಳು ಇಟ್ಟುಕೊಂಡಿರಬೇಕು ಹಾಗೂ ನೋಂದಾಯಿಸಿಕೊಳ್ಳುವ ಸದಸ್ಯರು ಬ್ರೋಚರ್‌ಗಳನ್ನು ಕಡ್ಡಾಯವಾಗಿ ಕೇಳಿ ಪಡೆದುಕೊಳ್ಳಬೇಕು.

26. 2016–17 ನೇ ಸಾಲಿನಲ್ಲಿ ಕೆಲವು ಸದಸ್ಯರು ಯಶಸ್ವಿನಿ ವಂತಿಗೆ ಹಣವನ್ನು ಸಹಕಾರ ಸಂಘಕ್ಕೆ ಪಾವತಿ ಮಾಡಿ, ಫೋಟೋ ಇತ್ಯಾದಿ ಅವಶ್ಯಕ ದಾಖಲೆಗಳನ್ನು ಒದಗಿಸದೆ ಇದ್ದರೆ, ಈ ಕಾರಣದಿಂದ ಸಹಕಾರ ಸಂಘದಲ್ಲಿ ಬಾಕಿ ಉಳಿದ ವಂತಿಗೆಯ ಮೊತ್ತವನ್ನು ಸಹಕಾರ ಸಂಘವು ಯಶಸ್ವಿನಿ ಟ್ರಸ್ಟ್‌ಗೆ ನೀಡಿದ ದೇಣಿಗೆಯೆಂದು ಪರಿಗಣಿಸಿ, ಟ್ರಸ್ಟ್‌ನ ಖಾತೆಗೆ ಜಮಾಮಾಡತಕ್ಕದ್ದು.

27. 2016–17ನೇ ಸಾಲಿನ ಯಶಸ್ವಿನಿ ಯೋಜನೆಯ ಅವಧಿಯು ದಿನಾಂಕ: 01–06–2015 ರಿಂದ ಪ್ರಾರಂಭವಾಗಿ 31–05–2017ಕ್ಕೆ ಮುಗಿಯುತ್ತದೆ. ಈ ಸುತ್ತೋಲೆ ಅನ್ವಯ ಹೊಸದಾಗಿ ನೋಂದಾವಣೆಯಾಗುವ/ಸೇರ್ಪಡೆಯಾಗುವ ಫಲಾನುಭವಿಗಳು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಸೌಲಭ್ಯವನ್ನು ದಿನಾಂಕ: 01.06.2016ರಿಂದ ಜಾರಿಗೆ ಬರುವಂತೆ ಮಾತ್ರ ಪಡೆಯಲು ಅರ್ಹರಾಗುತ್ತಾರೆ. ಆದ್ದರಿಂದ ಸಹಕಾರ ಸಂಘಗಳು ನೀಡುವ ವಂತಿಗೆ ಹಣ ಸ್ವೀಕೃತಿ ರಶೀದಿ/ಫಲಾನುಭವಿಗೆ ನೀಡುವ ನೋಂದಣಿ ನಮೂನೆ ಭಾಗದ ಪ್ರತಿಯಲ್ಲಿ ಈ ಮೇಲಿನ ಅಂಶವನ್ನು ಸ್ಪಷ್ಟವಾಗಿ ಬರೆಯಬೇಕು ಮತ್ತು ತಿಳುವಳಿಕೆಯನ್ನು ಸಹ ಫಲಾನುಭವಿಗೆ ನೀಡಬೇಕು.

ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಜಿಲ್ಲಾ ಸಹಕಾರ ಬ್ಯಾಂಕ್‌ಗಳ, ಹಾಲು ಉತ್ಪಾದಕರ ಒಕ್ಕೂಟಗಳ ಮತ್ತು ಇತರೆ ಪ್ರಮುಖ ಸಹಕಾರ ಸಂಘ/ ಸಂಸ್ಥೆಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಸಭೆಯನ್ನು ಪ್ರಾಂತೀಯ ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿನಾಂಕ 30–04–2016 ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ಗ್ರಾಮೀಣ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ.

P.R.315
S.C.250

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** 2016–17ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಸಿಒ/80/ಸಿಎಲ್ಎಸ್/2015, ಬೆಂಗಳೂರು ದಿನಾಂಕ: 19–03–2015.

**ಪ್ರಸ್ತಾವನೆ :–**

ಓದಲಾದ ಸರ್ಕಾರದ ಆದೇಶದಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2015–16ನೇ ಸಾಲಿನಲ್ಲಿ ನೋಂದಾಯಿಸಲು ಆದೇಶ ಹೊರಡಿಸಲಾಗಿತ್ತು. 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಈ ಯೋಜನೆಯನ್ನು ಮುಂದುವರೆಸಲು ಘೋಷಿಸಲಾಗಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/163/ಸಿಎಲ್ಎಸ್/2015 ಬೆಂಗಳೂರು ದಿನಾಂಕ: 15–04–2016**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2016–17ನೇ ಸಾಲಿನಲ್ಲಿ ನೋಂದಾಯಿಸಿಕೊಳ್ಳಲು ಅನುವಾಗುವಂತೆ ಈ ಕೆಳಕಂಡ ಆದೇಶವನ್ನು ಮಾರ್ಗಸೂಚಿಗಳೊಂದಿಗೆ ಹೊರಡಿಸಿದೆ.

**ಮಾರ್ಗಸೂಚಿಗಳು :**

1. ನಗರ, ಪಟ್ಟಣ ಪ್ರದೇಶ ಮತ್ತು ಪುರಸಭೆ ವ್ಯಾಪ್ತಿಯಲ್ಲಿ ಕಾರ್ಯನಿರತವಾಗಿರುವ ಸಹಕಾರ ಸಂಘಗಳಲ್ಲಿರುವ ಸದಸ್ಯರು ಮತ್ತು ಅವರ ಕುಟುಂಬವರ್ಗದವರಿಗೆ ನಗರ ಸಹಕಾರಿಗಳ ಯಶಸ್ವಿನಿ ಯೋಜನೆಯು ಅನ್ವಯಿಸುತ್ತದೆ. ಯೋಜನೆಯಲ್ಲಿ ನೋಂದಾಯಿಸಿಕೊಳ್ಳಲು ಇಚ್ಛಿಸುವವರು ಟ್ರಸ್ಟ್ ನಿಗಧಿಪಡಿಸಿದ ವಾರ್ಷಿಕ ವಂತಿಗೆಯನ್ನು ಪಾವತಿಸಿ ಸದಸ್ಯತ್ವ ಪಡೆಯಬಹುದು.
2. ಸಂಗ್ರಹವಾದ ವಂತಿಗೆ ಹಣವನ್ನು ಆಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಲ್ಲಿ ತೆರೆದಿರುವ ನಗರ ಯಶಸ್ವಿನಿ ಖಾತೆಗೆ ಜಮಾ ಮಾಡಬೇಕು. ಈ ಕಾರಣಕ್ಕಾಗಿ ಎಲಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ತಮ್ಮ ತಮ್ಮ ತಾಲ್ಲೂಕು ಬ್ರಾಂಚುಗಳಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಗಾಗಿ ಪ್ರತ್ಯೇಕ ಖಾತೆ ತೆರೆಯಬೇಕು. ಆಯಾ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳೊಡನೆ ವ್ಯವಹರಿಸಿ ನಗರ ಯಶಸ್ವಿನಿ ಯೋಜನೆಗಾಗಿ ಪ್ರತ್ಯೇಕ ಖಾತೆ ತೆರೆಯುವಂತೆ ಕ್ರಮವಹಿಸಬೇಕು.
3. ಸಹಕಾರ ಸಂಘಗಳ ಉಪ ನಿಬಂಧಕರು ಈ ಕೆಳಕಂಡ ಸಹಕಾರ ಸಂಘಗಳ ಯಾದಿ ತಯಾರಿಸಬೇಕು.

   ಅ) ಪಟ್ಟಣ ಸಹಕಾರ ಬ್ಯಾಂಕುಗಳು, ಸೌಹಾರ್ದ ಸಹಕಾರಿಗಳು, ಮತ್ತು ನೌಕರರೇತರ ಸಹಕಾರ ಸಂಘಗಳಲ್ಲದೆ, ವಕೀಲರ ಸಹಕಾರ ಸಂಘಗಳು, ಪತ್ರಕರ್ತರ ಸಹಕಾರ ಸಂಘಗಳು, ಮಂಗಳಮುಖಿಯರ ಸಹಕಾರ ಸಂಘಗಳು, ಗೃಹ ನಿರ್ಮಾಣ ಸಹಕಾರ ಸಂಘಗಳು, ಮಹಿಳಾ ಸಹಕಾರ ಸಂಘಗಳು, ಲೈಂಗಿಕ ಕಾರ್ಯಕರ್ತೆಯರ ಸಹಕಾರ ಸಂಘಗಳು, ಆಟೋಚಾಲಕರ ಸಹಕಾರ ಸಂಘಗಳು, ವಾಹನ ಚಾಲಕರ ಸಹಕಾರ ಸಂಘಗಳು, ಕಟ್ಟಡ ನಿರ್ಮಾಣ ಕೆಲಸಗಾರರ ಸಹಕಾರ ಸಂಘಗಳು, ಹೋಟೆಲ್ ಕೆಲಸಗಾರರ ಸಹಕಾರ ಸಂಘಗಳು, ಪಟ್ಟಣಗಳಲ್ಲಿರುವ ಪರಿಶಿಷ್ಠ ಜಾತಿ/ಪರಿಶಿಷ್ಠ ವರ್ಗದ ಸಹಕಾರ ಸಂಘಗಳನ್ನು ಕೈಬಿಡದೆ ಗುರುತಿಸಿ ಅಂತಹ ಸಹಕಾರ ಸಂಘಗಳನ್ನು ಪಟ್ಟಿ ಮಾಡಿ ಅಂತಹ ಸಹಕಾರ ಸಂಘಗಳಿಂದಲೂ ನಗರ ಯಶಸ್ವಿನಿ ಯೋಜನೆಗೆ ಸದಸ್ಯರನ್ನಾಗಿ ಮಾಡಲು ಕ್ರಮ ವಹಿಸಬೇಕು.

   (ಆ) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ವತಿಯಿಂದ ಸಂಘಟಿಸಲ್ಪಟ್ಟಿರುವ ಎಲ್ಲ ನಗರ ಪ್ರದೇಶದಲ್ಲಿರುವ ಸ್ವ–ಸಹಾಯ ಗುಂಪುಗಳ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರೂ ಸಹ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಲ್ಲಿ ನೋಂದಾಯಿಸಿಕೊಳ್ಳಲು ಅರ್ಹರಿರುತ್ತಾರೆ, ಆದರೆ ಅಂತಹ ಸ್ವಸಹಾಯ ಗುಂಪುಗಳ ರಚನೆಯಾಗಿ 3 ತಿಂಗಳು ಗತಿಸಿರಬೇಕು.
4. ಈ ಹಿಂದಿನ ಪದ್ಧತಿಯಂತೆ ಪಟ್ಟಣ ಸಹಕಾರ ಬ್ಯಾಂಕುಗಳು, ಪಹಣಿಯ ಆಧಾರದ ಮೇಲೆ ನಗರವಾಸಿಗಳಿಗೆ ಗ್ರಾಮೀಣ ಯಶಸ್ವಿನಿ ಯೋಜನೆಯಡಿ ನೋಂದಾಯಿಸುವುದನ್ನು ನಿಲ್ಲಿಸಲಾಗಿದೆ.
5. ಅವಿಭಕ್ತ ಕುಟುಂಬದ ಯಾವುದೇ ಒಬ್ಬ ಸದಸ್ಯನು /ಸದಸ್ಯಳು ಮೇಲೆ ತಿಳಿಸಿರುವ ಅರ್ಹ ಸಹಕಾರ ಸಂಘದ ಸದಸ್ಯರಾಗಿ ಯಶಸ್ವಿನಿ ಯೋಜನೆಯಡಿ ನೋಂದಾಯಿಸುವ ದಿನಾಂಕಕ್ಕೆ 3 ತಿಂಗಳು ಕಳೆದಿರಬೇಕು. ಸ್ವ–ಸಹಾಯ ಗುಂಪಿನ ಸದಸ್ಯರಾದರೆ ಅಂತಹ ಸ್ವ–ಸಹಾಯ ಗುಂಪನ್ನು ಸ್ಥಾಪಿಸಿ 3 ತಿಂಗಳು ಕಳೆದಿರಬೇಕು. ಆ ಕುಟುಂಬದ ಪ್ರತಿಯೊಬ್ಬ ಸದಸ್ಯನೂ ನಿಗಧಿತ ಅವಧಿಯಲ್ಲಿ ವಾರ್ಷಿಕ ವಂತಿಗೆ ಸಲ್ಲಿಸುವ ಮೂಲಕ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯ ಸೌಲಭ್ಯ ಪಡೆಯಬಹುದು. ಅವಿಭಕ್ತ ಕುಟುಂಬ ಅಂದರೆ ತಂದೆ, ತಾಯಿ, ಗಂಡು ಮಕ್ಕಳು / ಮದುವೆಯಾಗದ ಹೆಣ್ಣು ಮಕ್ಕಳು, ಸೊಸೆ, ಮೊಮ್ಮಕ್ಕಳೂ ಸೇರಿ ಎಂದು ಅರ್ಥೈಯಿಸುವುದು.
6. ಮದುವೆಯಾಗಿರುವ ಹೆಣ್ಣು ಮಗಳು ಹಾಗೂ ಅವಳ ಮಕ್ಕಳು ತಂದೆ/ತಾಯಿ/ಅಣ್ಣ/ತಮ್ಮ ಇವರ ಕುಟುಂಬದಲ್ಲಿಯೇ ಅಂದರೆ ಪ್ರಧಾನ ಅರ್ಜಿದಾರರ ಕುಟುಂಬದಲ್ಲಿ ವಾಸವಾಗಿದ್ದರೆ, ಅವರ ಪಾಲಿನ ವಂತಿಗೆ ಹಣ ಪಾವತಿಸಿದರೆ ನವೀಕರಣ / ನೋಂದಣಿಗೆ ಹಾಗೂ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ. ಮದುವೆಯಾದ ಹೆಣ್ಣು ಮಗಳು ಪ್ರಧಾನ ಅರ್ಜಿದಾರರ ಜೊತೆ ವಾಸವಾಗಿರದಿದ್ದಲ್ಲಿ ಸದಸ್ಯತ್ವ ಪಡೆಯಲು ಅರ್ಹಳಿರುವುದಿಲ್ಲ. ಆದರೆ ಮದುವೆಯಾಗುವುದಕ್ಕೆ ಮುಂಚೆ ಈ ಸಾಲಿನಲ್ಲಿ ಸದಸ್ಯತ್ವ ಪಡೆದಿದ್ದರೆ ಪ್ರಸಕ್ತ ಸಾಲಿನ ಯೋಜನಾ ಅಂತ್ಯದವರೆಗೆ ಸೌಲತ್ತು ಪಡೆಯಲು ಅರ್ಹರಿರುತ್ತಾಳೆ.
7. 2016–17 ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿ ವಾರ್ಷಿಕ ವಂತಿಗೆಯನ್ನು ಪ್ರತಿಯೊಬ್ಬರಿಗೆ ₹.710/–ಕ್ಕೆ ನಿಗದಿಗೊಳಿಸಲಾಗಿದೆ. ಈ ಯೋಜನೆಯ ಪ್ರಯೋಜನ ಪಡೆಯಲು ಉದ್ದೇಶಿಸುವ ಪ್ರತಿಯೊಬ್ಬರು ₹.710/– ರಂತೆ ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಪ್ರತಿಯೊಬ್ಬ ಸದಸ್ಯರಿಗೆ ಕಡ್ಡಾಯವಾಗಿ ಪಾವತಿ ಮಾಡಬೇಕು. ಈ ಪೈಕಿ ₹.10/– ನ್ನು ಸಂಘದ ಸಾದಿಲ್ವಾರು ವೆಚ್ಚಕ್ಕೆ ಮತ್ತು ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸಲು ಶ್ರಮಿಸಿದವರಿಗೆ ಪ್ರೋತ್ಸಾಹ ಧನವಾಗಿ ಸಹಕಾರ ಸಂಘ/ಸಂಸ್ಥೆಯು ಇಟ್ಟುಕೊಂಡು, ಉಳಿದ ₹.700/– ಗಳನ್ನು ಹಣ ಸ್ವೀಕರಿಸಿದ 15 ದಿನಗಳೊಳಗಾಗಿ ಸಂಬಂಧಿಸಿದ ಜಿಲ್ಲಾ ಸಹಕಾರ ಬ್ಯಾಂಕುಗಳಲ್ಲಿ ಯಶಸ್ವಿನಿ ಟ್ರಸ್ಟ್ ಹೊಂದಿರುವ ನಗರ ಯಶಸ್ವಿನಿ ಖಾತೆಗೆ ಜಮಾ ಮಾಡತಕ್ಕದ್ದು/ವರ್ಗಾಯಿಸತಕ್ಕದ್ದು. ವಿಳಂಬವಾದಲ್ಲಿ ಆ ಹಣವನ್ನು ಇಟ್ಟುಕೊಂಡ ಸಹಕಾರಿ ಸಂಘ/ ಸಂಸ್ಥೆಯವರು ಬ್ಯಾಂಕಿನ ನಿಯಮಗಳ ಪ್ರಕಾರ ವಿಳಂಬದ ಅವಧಿಗೆ ಬಡ್ಡಿ ಪಾವತಿ ಮಾಡಲು ಬದ್ಧರಾಗುತ್ತಾರೆ. ಪರಿಶಿಷ್ಠ ಜಾತಿ /ಪರಿಶಿಷ್ಠ ಪಂಗಡದ ಸದಸ್ಯರು ₹.110/– ಮಾತ್ರ ಪಾವತಿಸಬೇಕು ಉಳಿದ ₹.600/– ಗಳನ್ನು ಸರ್ಕಾರದಿಂದ ಸಹಾಯಧನವಾಗಿ ಪಾವತಿಸಲಾಗುವುದು.

8. ಒಂದೇ ಕುಟುಂಬದ ಐವರು ಅಥವಾ ಅದಕ್ಕಿಂತ ಹೆಚ್ಚಿಗೆ ಕುಟುಂಬ ಸದಸ್ಯರನ್ನು ಯಶಸ್ವಿನಿ ಸದಸ್ಯರನ್ನಾಗಿ ನೋಂದಾಯಿಸಿದಲ್ಲಿ/ ನವೀಕರಿಸಿದ್ದಲ್ಲಿ ಅವರು ಪಾವತಿಸಬೇಕಾದ ವಂತಿಗೆ ಹಣದಲ್ಲಿ ಅಂದರೆ ಪ್ರತಿ ಸದಸ್ಯರಿಗೆ ₹.700/– ರಲ್ಲಿ ಶೇ.15 ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ ಹಾಗೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರಿಗೆ ₹.100/– ರಲ್ಲಿ ಶೇ.15 ರಿಯಾಯಿತಿ ಪಡೆಯಲು ಅರ್ಹರಿರುತ್ತಾರೆ.

9. ಯಶಸ್ವಿನಿ ಸದಸ್ಯರಾಗಲು ವಯೋಮಿತಿಯ ನಿರ್ಬಂಧವಿರುವುದಿಲ್ಲ,

10. ನವಜಾತ ಶಿಶುವಿನ ತಾಯಿಯ ಹೆಸರು ಯಶಸ್ವಿನಿ ಕಾರ್ಡ್‌ನಲ್ಲಿದ್ದರೆ 30 ದಿನಗಳವರೆಗೆ ತಾಯಿ ಹೆಸರು ಇರುವ ಯಶಸ್ವಿನಿ ಕಾರ್ಡಿನ ಆಧಾರದ ಮೇಲೆ ಈ ಯೋಜನೆಯಡಿಯಲ್ಲಿ ಬರುವ ಸೌಲಭ್ಯವನ್ನು ಪಡೆಯಬಹುದು. 30 ದಿನಗಳ ನಂತರದಲ್ಲಿ ಮಗುವಿನ ಹೆಸರಿನೊಂದಿಗೆ ಆ ವರ್ಷದಲ್ಲಿ ಯಾವ ಸಂದರ್ಭದಲ್ಲಿಯೂ ನೋಂದಾಯಿಸಿಕೊಂಡು ಯೋಜನೆಯ ಸವಲತ್ತು ಪಡೆಯಬಹುದು.

11. 2016–17 ನೇ ಸಾಲಿನಲ್ಲಿ ಕನಿಷ್ಠ 20.00 ಲಕ್ಷ ಸದಸ್ಯರುಗಳನ್ನು ನೋಂದಾಯಿಸುವ ಗುರಿ ನಿಗಧಿಪಡಿಸಲಾಗಿದೆ. ಪ್ರತಿ ಜಿಲ್ಲೆಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಸಹಕಾರ ಸಂಘಗಳ ನಿಬಂಧಕರು ಪ್ರತಿ ಜಿಲ್ಲೆಗೆ ಪ್ರತ್ಯೇಕ ಗುರಿ ನಿಗಧಿಗೊಳಿಸುವಂತೆ ಸೂಚಿಸಲಾಗಿದೆ. 2015–16 ನೇ ಸಾಲಿನಲ್ಲಿ 1.85 ಲಕ್ಷ ಸದಸ್ಯರನ್ನಾಗಿ ನೋಂದಾಯಿಸಿದ್ದವರೆಲ್ಲರನ್ನೂ 2016–17ನೇ ಸಾಲಿಗೆ ಯಶಸ್ವಿನಿ ನವೀಕರಿಸಲು ಕ್ರಮ ಕೈಗೊಳ್ಳತಕ್ಕದ್ದು.

**12. 2016–17 ನೇ ಸಾಲಿಗೆ ನಗರ ಯಶಸ್ವಿನಿ ಸದಸ್ಯರುಗಳನ್ನು ನೋಂದಾಯಿಸುವ ಕಾರ್ಯಕ್ರಮವನ್ನು ಈ ಕೆಳಗಿನಂತೆ ನಿಗಧಿಗೊಳಿಸಲಾಗಿದೆ.**

(ಅ) ಯಶಸ್ವಿನಿ ಸದಸ್ಯರ ನೋಂದಣಿ / ನವೀಕರಣ ಪ್ರಾರಂಭದ ದಿನಾಂಕ: 20.04.2016

(ಆ) ಯಶಸ್ವಿನಿ ಸದಸ್ಯರ ನೋಂದಣಿ / ನವೀಕರಣ ಕೊನೆಯ ದಿನಾಂಕ: 31.05.2016.

13. 2016–17ನೇ ಸಾಲಿನಲ್ಲಿ ಯಶಸ್ವಿನಿ ಸದಸ್ಯರುಗಳನ್ನು ಹೊಸದಾಗಿ ನೋಂದಾಯಿಸಲು 2015–16ನೇ ಸಾಲಿನಲ್ಲಿ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಗಾಗಿ ಸರಬರಾಜು ಮಾಡಿರುವ ಹೊಸ ನೋಂದಣಿ ಫಾರಂಗಳನ್ನು ಮಾತ್ರ ಉಪಯೋಗಿಸಬೇಕು ಮತ್ತು ಗುರುತಿನ ಚೀಟಿ ಒದಗಿಸಬೇಕು. ಬೇರೆ ಯಾವುದೇ ವರ್ಷಗಳಲ್ಲಿ ನೀಡಿರುವ ಫಾರಂಗಳನ್ನು ಉಪಯೋಗಿಸತಕ್ಕದ್ದಲ್ಲ. ಸಹಕಾರ ಸಂಘಗಳಿಗೆ ಫಾರಂ ಪೂರೈಸುವಾಗ ಪುಸ್ತಕದ ಸಂಖ್ಯೆ ಮತ್ತು ಯುನಿಕ್ ಐ.ಡಿ ಸಂಖ್ಯೆಯನ್ನು ನಮೂದಿಸಿ ಕಾರ್ಯದರ್ಶಿಯಿಂದ ಸ್ವೀಕೃತಿ ಪಡೆದುಕೊಳ್ಳಬೇಕು. ಈ ಬಗ್ಗೆ ಪರಿಶೀಲನೆಗಾಗಿ ಪ್ರತ್ಯೇಕ ಪುಸ್ತಕದಲ್ಲಿ ಬರೆದಿಟ್ಟಿರಬೇಕು. ನವೀಕರಣಕ್ಕಾಗಿ ವೆಬ್‌ಸೈಟ್‌ನಲ್ಲಿರುವ ಫಾರಂನ್ನು ಉಪಯೋಗಿಸಬೇಕು. ನವೀಕರಿಸಿದವರಿಗೆ ಹೊಸದಾಗಿ ಐ.ಡಿ ಕಾರ್ಡ್ ಕೊಡತಕ್ಕದ್ದಲ್ಲ, ಅವರಿಗೆ ಹಣ ಪಾವತಿಸಿದ್ದಕ್ಕೆ ರಶೀತಿ ಕೊಟ್ಟು, ರಶೀತಿಯಲ್ಲಿ ಈಗಾಗಲೇ ಕೊಟ್ಟಿರುವ ಕಾರ್ಡ್‌ನ ಯುನಿಕ್ ಐ.ಡಿ ನಂಬರನ್ನು ನಮೂದಿಸಬೇಕು. ಸಹಕಾರ ಸಂಘಗಳ ಕಾರ್ಯದರ್ಶಿಗಳು ನವೀಕರಣಕ್ಕಾಗಿ ಭರ್ತಿ ಮಾಡಿದ ಮತ್ತು ಹೊಸದಾಗಿ ನೋಂದಾಯಿಸಲು ಭರ್ತಿ ಮಾಡಿದ ಫಾರಂಗಳ ಕಛೇರಿ ಪ್ರತಿಯನ್ನು ಡಾಟಾ ಎಂಟ್ರಿಗೆ ಕಳುಹಿಸಬೇಕು.

14 ಅರ್ಹ ಸಹಕಾರ ಸಂಘಗಳು ಸದಸ್ಯರುಗಳಿಂದ ನಿಗಧಿತ ವಾರ್ಷಿಕ ವಂತಿಗೆ ಹಣ ಪಡೆದು ಸಂಘದ ಹಣ ಸ್ವೀಕೃತಿ ರಶೀದಿಯನ್ನು ಕೊಡಬೇಕು. ಫಾರಂನಲ್ಲಿ ಸದಸ್ಯರನ್ನು ನೋಂದಾಯಿಸಿದ ದಿನಾಂಕವನ್ನು ತಪ್ಪದೆ ನಮೂದಿಸಬೇಕು. ನೋಂದಣಿ ಫಾರಂನ ಕೆಳಭಾಗವನ್ನು ಸದಸ್ಯರಿಗೆ ಕೊಡಬೇಕು. ಮೇಲ್ಭಾಗವನ್ನು ಡಾಟಾ ಎಂಟ್ರಿ ಮಾಡಲು ಸಂಬಂಧಿಸಿದ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರಿಗೆ ಪ್ರತಿ ತಿಂಗಳ ಕೊನೆಯಲ್ಲಿ ಸಂಗ್ರಹಿಸಿದ ವಂತಿಗೆಯ ಹಣವನ್ನು ಬ್ಯಾಂಕಿಗೆ ಜಮೆ ಮಾಡಿ ರಶೀದಿಯೊಂದಿಗೆ ಕಳುಹಿಸಬೇಕು ಮತ್ತು ಆಗಿಂದಾಗ್ಗೆ ಡಾಟಾ ಎಂಟ್ರಿ ಮಾಡಲು ಅನುಕೂಲವಾಗುವಂತೆ ಪ್ರತಿ ತಿಂಗಳ ಕೊನೆಯಲ್ಲಿ ಹೊಸ ನೋಂದಣಿ ಅರ್ಜಿ/ನವೀಕರಣದ ವಿವರಗಳನ್ನು ಅಂದರೆ ಹೊಸ ಅರ್ಜಿಗಳಲ್ಲಿ ಸದಸ್ಯರುಗಳ ಪೋಟೋ ಅಂಟಿಸಿ, ಎಲ್ಲಾ ವಿವರಗಳೊಂದಿಗೆ ಹೊಸದಾಗಿ ನೋಂದಾಯಿಸಿದ ಮತ್ತು ನವೀಕರಣವಾದ ಸದಸ್ಯರುಗಳ ತಃಖ್ತೆಯೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ನೀಡಿ ಸ್ವೀಕೃತಿ ಪಡೆಯಬೇಕು.

15 2016–17 ನೇ ಸಾಲಿನಲ್ಲಿ ಹೊಸದಾಗಿ ನೋಂದಾಯಿಸುವವರಿಗೆ ಹೊಸ ಕಾರ್ಡುಗಳನ್ನು ಕೊಡಲಾಗುವುದು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರ ಎರಡು ಭಾವಚಿತ್ರಗಳನ್ನು ತಂದು ಕಛೇರಿ ಪ್ರತಿ ಮತ್ತು ಸದಸ್ಯರ ಪ್ರತಿಯ ಹಿಂಭಾಗದಲ್ಲಿ ಅರ್ಜಿ ಫಾರಂನಲ್ಲಿ ಕ್ರಮ ಸಂಖ್ಯೆ ಅನುಗುಣವಾಗಿ ಪೋಟೋಗಳನ್ನು ಅಂಟಿಸಿ ಭಾವಚಿತ್ರದ ಕೆಳಗೆ ಅವರ ಹೆಸರನ್ನು ಬರೆಯಬೇಕು.

16 ಈಗಾಗಲೇ ಕಾರ್ಡ್ ಹೊಂದಿರುವವರು ನವೀಕರಣ ಸಂದರ್ಭದಲ್ಲಿ ವಂತಿಗೆ ತುಂಬಿ ಹೊಸದಾಗಿ ಸದಸ್ಯರನ್ನು ಸೇರಿಸಲು ಬಯಸಿದ್ದಲ್ಲಿ, ಪ್ರಧಾನ ಅರ್ಜಿದಾರರಿಗೆ ನೀಡಿರುವ ಕಾರ್ಡಿನಲ್ಲಿ ಹೊಸ ವ್ಯಕ್ತಿಯ ಮಾಹಿತಿಯನ್ನು ಮುಖಪುಟದಲ್ಲಿ ಬರೆದು ಹಿಂಬದಿಯಲ್ಲಿ ಪೋಟೋ ಅಂಟಿಸಬೇಕು ಹಾಗೂ ಆ್ಯಡ್–ಆನ್ ಕಾರ್ಡ್‌ನಲ್ಲಿ ಹೊಸದಾಗಿ ಸೇರ್ಪಡೆಗೊಂಡ ವ್ಯಕ್ತಿಯ ಮಾಹಿತಿಯನ್ನು ಮುಖಪುಟದಲ್ಲಿ ಬರೆದು ಹಿಂಬದಿಯಲ್ಲಿ ಪೋಟೋ ಅಂಟಿಸಬೇಕು ಮತ್ತು ಆ ಆ್ಯಡ್–ಆನ್ ಕಾರ್ಡ್‌ನ್ನು ಡಾಟಾ ಎಂಟ್ರಿಗೆ ಸಲ್ಲಿಸತಕ್ಕದ್ದು.

17. 2016–17ನೇ ಸಾಲಿನಲ್ಲಿ ಹೊಸದಾಗಿ ನೋಂದಣಿ/ನವೀಕರಣಗೊಂಡ/ಸೇರ್ಪಡೆಯಾದ ಸದಸ್ಯರುಗಳಿಗೆ ಸಂಘವು ವಾರ್ಷಿಕ ವಂತಿಗೆ ಹಣ ಪಡೆದು ನೀಡಿರುವ ಸ್ವೀಕೃತಿ ರಶೀದಿಯನ್ನು ಮತ್ತು ನೋಂದಣಿ ಫಾರಂ (ಐ.ಡಿ ಕಾರ್ಡ್) ಸದಸ್ಯರು 2016–17ನೇ ಸಾಲಿನ ಅಂತ್ಯದವರೆಗೆ ಸುರಕ್ಷಿತವಾಗಿ ಇಟ್ಟುಕೊಳ್ಳಬೇಕು ಮತ್ತು ಯೋಜನೆಯ ಸೌಲಭ್ಯವನ್ನು ಪಡೆಯುವ ಸಂದರ್ಭದಲ್ಲಿ ರಶೀದಿಯನ್ನು ಟ್ರಸ್ಟ್‌ನಿಂದ ಅಂಗೀಕರಿಸಲ್ಪಟ್ಟ ಆಸ್ಪತ್ರೆಗಳಿಗೆ ಕಡ್ಡಾಯವಾಗಿ ಹಾಜರುಪಡಿಸಬೇಕು ಎಂಬ ತಿಳವಳಿಕೆಯನ್ನು ಸಂಘವು ನೋಂದಾಯಿತ ಸದಸ್ಯರಿಗೆ ತಿಳಿಸತಕ್ಕದ್ದು.

18 ಹಿಂದಿನ ವರ್ಷಗಳಲ್ಲಿ ನೋಂದಾಯಿಸಿದ್ದ ಎಲ್ಲಾ ಯಶಸ್ವಿನಿ ಸದಸ್ಯರಿಗೂ ಯೂನಿಕ್ ಐಡಿ ನೀಡಿ ಮಾಹಿತಿಯನ್ನು ಯಶಸ್ವಿನಿ ವೆಬ್‌ಸೈಟ್ WWW. yeshasvini.Kar.nic.inನಲ್ಲಿ ಅಳವಡಿಸಲಾಗಿದೆ. ಯಾವುದೇ ಕಾರಣದಿಂದ ಹಿಂದಿನ ವರ್ಷಗಳಲ್ಲಿ ನೋಂದಾಯಿಸಿಕೊಂಡ ಸದಸ್ಯರು ನವೀಕರಿಸಿಕೊಂಡದಿದ್ದಲ್ಲಿ ಅಂತಹವರು ಈ ವರ್ಷ ಹೊಸದಾಗಿ ಕಾರ್ಡ್ ಪಡೆಯಬಹುದು.

19. ನಗರ ಸಹಕಾರ ಸಂಘಗಳು ಅವರ ಸದಸ್ಯರಿಗೆ ಸಾಲ ವಿತರಿಸುವ ಮತ್ತು ಇತರೆ ಸಂದರ್ಭದಲ್ಲಿ ಹಣ ಪಾವತಿ ಮಾಡುವಾಗ ಸದಸ್ಯರ ಮನವೊಲಿಸಿ ಅವರು ಮತ್ತು ಅವರ ಕುಟುಂಬದ ಸದಸ್ಯರನ್ನು ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿ ನೋಂದಣಿ ಮಾಡಬೇಕು. ಪ್ರಧಾನ ಅರ್ಜಿದಾರರು ಮತ್ತು ಅವರ ಕುಟುಂಬದ ಯಾವುದೇ ಸದಸ್ಯನು ಸರ್ಕಾರಿ ನೌಕರನಾಗಿ ಅಥವಾ ಖಾಸಗಿ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅಥವಾ ಬೇರೆ ಯಾವುದೇ ಆರೋಗ್ಯ ವಿಮಾ ಯೋಜನೆಯ ಸೌಲಭ್ಯಕ್ಕೆ ಅರ್ಹನಾಗಿದ್ದಲ್ಲಿ, ಅಂತಹವರನ್ನು ಯಶಸ್ವಿನಿ ಯೋಜನೆಯ ಫಲಾನುಭವಿಯಾಗಿ ನೋಂದಾಯಿಸಬಾರದು. ಆದಾಗ್ಯೂ ಯಾವುದೇ ಕಾರಣಕ್ಕಾಗಿ ನೋಂದಾಯಿಸಿದರೂ ಅವರು ಯಶಸ್ವಿನಿ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ

20. ರಾಜ್ಯದಲ್ಲಿ ಕೆಲವು ಹಾಲು ಉತ್ಪಾದಕರ ಒಕ್ಕೂಟಗಳು ಮತ್ತು ಕೆಲವು ಸಹಕಾರ ಸಂಘ/ ಸಂಸ್ಥೆಗಳು ಅವುಗಳ ಸದಸ್ಯರ ಯಶಸ್ವಿನಿ ವಂತಿಗೆಯಲ್ಲಿ ಭಾಗಶಃ ಹಣವನ್ನು ಸಹಕಾರ ಸಂಘದ ಸ್ವಂತ ಬಂಡವಾಳದಿಂದ ಭರಿಸುತ್ತಿವೆ. ಈ ಪದ್ಧತಿಯನ್ನು ರಾಜ್ಯದ ಎಲ್ಲಾ ಸಹಕಾರ ಸಂಘ ಸಂಸ್ಥೆಗಳೂ ಕೂಡ ಅನುಸರಿಸುವಂತೆ ಪ್ರೋತ್ಸಾಹಿಸಲು ಸೂಚಿಸಲಾಗಿದೆ.

21. 2016–17ನೇ ಸಾಲಿನಲ್ಲಿ ಹೊಸದಾಗಿ/ನವೀಕರಣ ಮಾಡಿಕೊಳ್ಳುವ ಸದಸ್ಯರುಗಳು ಸುಳ್ಳು ಮಾಹಿತಿ ಮತ್ತು ಅಕ್ರಮವಾಗಿ ಸದಸ್ಯರ ಅಥವಾ ಸಹಕಾರ ಸಂಘಗಳ ತಪ್ಪಿನಿಂದಾಗಿ ಆಗಿದ್ದರೆ ಗೊತ್ತಿದ್ದೋ ಅಥವಾ ಗೊತ್ತಿಲ್ಲದೆಯೋ ನೋಂದಣಿ ಹೊಂದಿದ್ದರೆ ಅಂತಹ ವ್ಯಕ್ತಿಗಳು ಯಶಸ್ವಿನಿ ಯೋಜನೆಯಡಿಯಲ್ಲಿ ಸೌಲಭ್ಯವನ್ನು ಪಡೆಯಲು ಅನರ್ಹರು ಹಾಗೂ ಪಾವತಿಸಿದ ವಂತಿಗೆ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೆಯೇ ಅಂತಹ ಫಲಾನುಭವಿಗಳ ಯಶಸ್ವಿನಿ ಯೋಜನೆಯ ಸದಸ್ಯತ್ವ ತಂತಾನೇ ರದ್ದುಗೊಳ್ಳುತ್ತದೆ. ಪ್ರತ್ಯೇಕ ರದ್ದತಿ ಆದೇಶದ ಅವಶ್ಯಕತೆ ಇರುವುದಿಲ್ಲ.

22. ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿನ ಮಾಹಿತಿಯನ್ನೊಳಗೊಂಡ ಬ್ರೋಚರ್‌ಗಳನ್ನು ಸಹಕಾರ ಸಂಘಗಳು 2016–17ನೇ ಸಾಲಿಗೆ ಯೋಜನೆಯಡಿಯಲ್ಲಿ ಹೊಸದಾಗಿ ನೋಂದಾಯಿಸುವ/ನವೀಕರಣಗೊಳ್ಳುವ ಫಲಾನುಭವಿಗಳ ಯಶಸ್ವಿನಿ ಕಾರ್ಡ್ ಹೊಂದಿರುವ ಪ್ರಧಾನ ಅರ್ಜಿದಾರರಿಗೆ ಕೊಡತಕ್ಕದ್ದು.

23. ಈ ಕೆಳಕಂಡಂತೆ ಸೌಲಭ್ಯಗಳನ್ನು ಯಶಸ್ವಿನಿ ಸದಸ್ಯರಿಗೆ ಒದಗಿಸಲಾಗುವುದು.

A. **ವಾರ್ಡ್‌ಗಳ ಸೌಲಭ್ಯ:** ಜನರಲ್ ವಾರ್ಡ್‌ನ ಸೌಲಭ್ಯದಲ್ಲಿ ಯಶಸ್ವಿನಿ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಅನುಮತಿಸಿದ 823 ಶಸ್ತ್ರಚಿಕಿತ್ಸೆಗಳನ್ನು ಒದಗಿಸಲಾಗುವುದು. ಯಶಸ್ವಿನಿ ಸದಸ್ಯರು ಸ್ಪೆಷಲ್ ವಾರ್ಡ್‌ನಲ್ಲಿ ಚಿಕಿತ್ಸೆ ಪಡೆಯಲು ಇಚ್ಛಿಸಿದರೆ ಅಂತಹ ಸದಸ್ಯರು ಸ್ಪೆಷಲ್ ವಾರ್ಡ್‌ನಲ್ಲಿ ಚಿಕಿತ್ಸೆಗೆ ಯಶಸ್ವಿನಿ ಟ್ರಸ್ಟ್ ನಿಗಧಿಪಡಿಸುವ ವೆಚ್ಚವನ್ನು ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಿಂದ ಆಸ್ಪತ್ರೆಗೆ ದೊರಕುವ ಚಿಕಿತ್ಸಾ ವೆಚ್ಚವನ್ನು ಕಳೆದು ಉಳಿದ ಮೊತ್ತವನ್ನು ಪಾವತಿಸಬೇಕು.

B. **ರಿಯಾಯಿತಿ ದರದ ಹೊರರೋಗಿ ಚಿಕಿತ್ಸೆ:** 2016–17ನೇ ಸಾಲಿನಲ್ಲಿಯೂ ಸಹ ರಿಯಾಯಿತಿ ದರದಲ್ಲಿ ಅಂದರೆ ₹.100/– ಸಾಮಾನ್ಯ ಹೊರರೋಗಿ ತಪಾಸಣೆಗೆ ಯಶಸ್ವಿನಿ ಸದಸ್ಯರು ಪಾವತಿಸಬೇಕು. ವಿಶೇಷ ಹೊರರೋಗಿ ತಪಾಸಣೆಗೆ ₹.200/– ಪಾವತಿಸಬೇಕು ಮತ್ತು ಅವರು ತಪಾಸಣೆಗಾಗಿ ಪಾವತಿಸಿದ ರಶೀತಿಯ ಮೇಲೆ 3 ತಿಂಗಳವರೆಗೆ ಮೇಲೆ ಹೇಳಿದ ಹೊರರೋಗಿ ಚಿಕಿತ್ಸೆಗಳನ್ನು ಉಚಿತವಾಗಿ ಪಡೆಯಬಹುದು.

C. **ಕ್ಲಿನಿಕಲ್ ಇನ್ವೆಸ್ಟಿಗೇಷನ್ :** 2016–17ನೇ ಸಾಲಿನಲ್ಲಿಯೂ ಯಶಸ್ವಿನಿ ಸದಸ್ಯರು ಶೇ.25 ರಿಯಾಯಿತಿ ದರದಲ್ಲಿ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಮತ್ತು ಇತರೆ ತಪಾಸಣೆಗಳನ್ನು (Clinical & other Investigation) ಪಡೆಯಬಹುದು.

D. **ಗರಿಷ್ಠ ಮೊತ್ತದ ಚಿಕಿತ್ಸೆ :** ಆಯಾ ವರ್ಷದಲ್ಲಿ ಒಂದು ಬಾರಿ ದಾಖಲಾದರೆ ₹.1.75 ಲಕ್ಷಗಳು ಮತ್ತು ಅದೇ ವರ್ಷ ಅನೇಕ ಸಾರಿ ಆಸ್ಪತೆಗೆ ದಾಖಲಾದರೆ ₹.2.50 ಲಕ್ಷಗಳು.

24. ಈ ಬಗ್ಗೆ ಮಾಹಿತಿ ಇರುವ ಬ್ರೋಚರ್‌ಗಳನ್ನು ಪ್ರಧಾನ ಅರ್ಜಿದಾರರಿಗೆ ನೀಡಿ, ಬ್ರೋಚರನ್ನು ಸ್ವೀಕರಿಸಿರುವ ಬಗ್ಗೆ ಸ್ವೀಕೃತಿಯನ್ನು ಪಡೆದು ಸಹಕಾರ ಸಂಘಗಳು ಇಟ್ಟುಕೊಂಡಿರಬೇಕು ಹಾಗೂ ನೋಂದಾಯಿಸಿಕೊಳ್ಳುವ ಸದಸ್ಯರು ಬ್ರೋಚರ್‌ಗಳನ್ನು ಕಡ್ಡಾಯವಾಗಿ ಕೇಳಿ ಪಡೆದುಕೊಳ್ಳಬೇಕು.

25. 2016–17ನೇ ಸಾಲಿನಲ್ಲಿ ಕೆಲವು ಸದಸ್ಯರು ಯಶಸ್ವಿನಿ ವಂತಿಗೆ ಹಣವನ್ನು ಸಹಕಾರ ಸಂಘಕ್ಕೆ ಪಾವತಿ ಮಾಡಿ, ಪೋಟೋ ಇತ್ಯಾದಿ ಅವಶ್ಯಕ ದಾಖಲೆಗಳನ್ನು ಒದಗಿಸದೆ ಇದ್ದರೆ, ಈ ಕಾರಣದಿಂದ ಸಹಕಾರ ಸಂಘದಲ್ಲಿ ಬಾಕಿ ಉಳಿದ ವಂತಿಗೆಯ ಮೊತ್ತವನ್ನು ಸಹಕಾರ ಸಂಘವು ಯಶಸ್ವಿನಿ ಟ್ರಸ್ಟ್‌ಗೆ ನೀಡಿದ ದೇಣಿಗೆಯೆಂದು ಪರಿಗಣಿಸಿ, ಟ್ರಸ್ಟ್‌ನ ಖಾತೆಗೆ ಜಮಾಮಾಡತಕ್ಕದ್ದು.

26. 2016–17ನೇ ಸಾಲಿನ ಯಶಸ್ವಿನಿ ಯೋಜನೆಯ ಅವಧಿಯು ದಿನಾಂಕ: 01–06–2016 ರಿಂದ ಪ್ರಾರಂಭವಾಗಿ 31–05–2017ಕ್ಕೆ ಮುಗಿಯುತ್ತದೆ. ಆದ ಕಾರಣ ಈ ಸುತ್ತೋಲೆ ಅನ್ವಯ ಹೊಸದಾಗಿ ನೋಂದಾವಣೆಯಾಗುವ /ಸೇರ್ಪಡೆಯಾಗುವ ಫಲಾನುಭವಿಗಳು ಯಶಸ್ವಿನಿ ಯೋಜನೆಯ ಸೌಲಭ್ಯವನ್ನು ದಿನಾಂಕ: 01.06.2016ರಿಂದ ಜಾರಿಗೆ ಬರುವಂತೆ ಮಾತ್ರ ಪಡೆಯಲು ಅರ್ಹರಾಗುತ್ತಾರೆ. ಆದ್ದರಿಂದ ಸಹಕಾರ ಸಂಘಗಳು ನೀಡುವ ವಂತಿಗೆ ಹಣ ಸ್ವೀಕೃತಿ ರಶೀತಿ/ ಫಲಾನುಭವಿಗೆ ನೀಡುವ ನೋಂದಣಿ ನಮೂನೆ ಭಾಗದ ಪ್ರತಿಯಲ್ಲಿ ಈ ಮೇಲಿನ ಅಂಶವನ್ನು ಸ್ಪಷ್ಟವಾಗಿ ಬರೆಯಬೇಕು ಮತ್ತು ತಿಳುವಳಿಕೆಯನ್ನು ಕೂಡ ಫಲಾನುಭವಿಗೆ ನೀಡಬೇಕು.

ಯಶಸ್ವಿನಿ ಯೋಜನೆಯ ಮಾರ್ಗಸೂಚಿಗಳ ಬಗ್ಗೆ ತಿಳುವಳಿಕೆ ನೀಡಲು ಆಯಾ ಪ್ರಾಂತದ ಸಹಕಾರ ಸಂಘಗಳ ಜಂಟಿ ನಿಬಂಧಕರು ಅವರ ವ್ಯಾಪ್ತಿಯ ಇಲಾಖಾಧಿಕಾರಿಗಳ, ಎಲ್ಲಾ ಪಟ್ಟಣ ಸಹಕಾರ ಮತ್ತು ಇತರೆ ಪ್ರಮುಖ ಪಟ್ಟಣ ಸಹಕಾರ ಸಂಘ/ ಸಂಸ್ಥೆಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಭೆಯನ್ನು ಪ್ರಾಂತ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ನಿರ್ವಹಿಸಲು ಸೂಚಿಸಿದೆ. ನಂತರ ದಿನಾಂಕ 30–04–2016 ರೊಳಗೆ ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರುಗಳು ಅವರ ಜಿಲ್ಲೆಯ ಎಲ್ಲಾ ನಗರ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಯವರ, ಸ್ವಸಹಾಯ ಗುಂಪು ಮತ್ತು ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಸಭೆ ಕರೆದು ಕಾರ್ಯಾಗಾರ ಏರ್ಪಡಿಸಿ ಯೋಜನೆಯ ಮಾರ್ಗಸೂಚಿ ನಿಯಮಗಳು, ಇತಿಮಿತಿಗಳು ಮತ್ತು ಯೋಜನೆಯಿಂದ ಸೌಲಭ್ಯ ಪಡೆಯುವವರ ಬಗ್ಗೆ ಮಾಹಿತಿಯನ್ನು ನೀಡಿ, ತೆಗೆದುಕೊಂಡ ಕ್ರಮದ ಬಗ್ಗೆ ವರದಿಯನ್ನು ಸಹಕಾರ ಸಂಘಗಳ ನಿಬಂಧಕರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸಲು ಸೂಚಿಸಲಾಗಿದೆ,

**P.R.316**

**SC-250**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ,**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 18ರ ತಿದ್ದುಪಡಿಯನ್ವಯ ಸಹ ಸದಸ್ಯರನ್ನು ಶೇಕಡಾ 15ಕ್ಕೆ ನಿರ್ಬಂಧಿಸಿರುವ ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 58 ಶಾಸನ 2014, ದಿನಾಂಕ: 06.09.2014.
2. ಸರ್ಕಾರದ ಆದೇಶ ಸಂಖ್ಯೆ : ಸಿಒ 91 ಸಿಎಲ್ಎಂ 2015, ದಿನಾಂಕ: 01.04.2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಹೆಚ್ಎಸ್‌ಜಿ–2:534 ಹೆಚ್‌ಹೆಚ್ಎಸ್: 2014–15, ದಿನಾಂಕ: 01.04.2016.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಅಧಿಸೂಚನೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 18(1)ರ ಪರಂತುಕ ಹೊಸ ಅವಕಾಶವನ್ನು ದಿನಾಂಕ: 06.09.2014 ರಿಂದ ಜಾರಿಗೆ ಬರುವಂತೆ ಸೇರ್ಪಡೆಗೊಳಿಸಿದ್ದು, ಅದರಂತೆ ಸಂಘದ ಒಟ್ಟು ಸದಸ್ಯರಿಗೆ ಸಹ ಸದಸ್ಯರ ಸಂಖ್ಯೆ ಶೇಕಡಾ 15 ಮೀರುವಂತಿಲ್ಲವೆಂದು, ಈಗಾಗಲೇ ಶೇಕಡಾ 15ಕ್ಕಿಂತ ಈ ರೀತಿ ಸದಸ್ಯರು ಹೆಚ್ಚಿದ್ದಲ್ಲಿ ಅವರುಗಳನ್ನು ಪ್ರಕರಣ 16ರ ರೀತ್ಯಾ ಅರ್ಹವಿದ್ದಲ್ಲಿ ಸಾಮಾನ್ಯ ಸದಸ್ಯರಾಗಿ ಮಾಡುವುದು ಅಥವಾ ಅರ್ಹವಿಲ್ಲದಿದ್ದಲ್ಲಿ ಅಧಿನಿಯಮದ ತಿದ್ದುಪಡಿ ಅವಕಾಶಗಳು ಜಾರಿಗೆ ಬಂದ ಆರು ತಿಂಗಳೊಳಗಾಗಿ ಅವರನ್ನು ತೆಗೆದುಹಾಕುವುದು ಎಂದಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121 ರನ್ವಯ ಸಹಕಾರ ಸಂಘಗಳಲ್ಲಿನ ಸಹ ಸದಸ್ಯರನ್ನು ಒಟ್ಟು ಸಂಘದ ಸದಸ್ಯರ ಶೇಕಡಾ 15ಕ್ಕೆ ಮಿತಿಗೊಳಿಸುವ ಅವಕಾಶದ ಕಾಲಾವಧಿಯನ್ನು "ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ" ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಒಂದು ವರ್ಷದವರೆಗೆ ವಿನಾಯಿತಿ ನೀಡಲಾಗಿತ್ತು.

ಮೇಲೆ ಓದಲಾದ (3)ರ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ಮೇಲಿನ ಆದೇಶದಲ್ಲಿ ವಿನಾಯಿತಿ ನೀಡಿರುವ ಅವಧಿ ಮುಗಿದಿರುವುದರಿಂದ ಮತ್ತು ಈ ವಿಷಯ ಒಳಗೊಂಡಿರುವ ಅಧಿನಿಯಮಕ್ಕೆ ತಂದಿರುವ ತಿದ್ದುಪಡಿ ವಿಧೇಯಕವು ವಿಧಾನಸಭೆಯಲ್ಲಿ ಅನುಮೋದನೆಯಾಗಿದ್ದು, ವಿಧಾನ ಪರಿಷತ್ತಿನಲ್ಲಿ ಅನುಮೋದನೆ ಪಡೆಯಲು ಬಾಕಿ ಇದ್ದು ಇದಕ್ಕೆ ಕಾಲಾವಕಾಶ ಬೇಕಾಗಿರುವುದರಿಂದ ಮತ್ತು ಈ ನಡುವಿನ ಅವಧಿಯಲ್ಲಿ ಕಾನೂನು ಅನುಷ್ಠಾನದಲ್ಲಿ ಉಂಟಾಗಬಹುದಾದ ತೊಡಕುಗಳನ್ನು ನಿವಾರಿಸುವ ದೃಷ್ಟಿಯಿಂದ ಈ ವಿನಾಯತಿಯ ಅವಧಿಯನ್ನು ಪ್ರಕರಣ 121ರಡಿ ದಿನಾಂಕ: 01.04.2016 ರಿಂದ ಕನಿಷ್ಠ ಆರು ತಿಂಗಳ ಅವಧಿಗೆ ವಿಸ್ತರಿಸಿ ಹೊರಡಿಸುವಂತೆ ಕೋರಿ ನಿಬಂಧಕರ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ/91/ಸಿಎಲ್ಎಂ/2015, ಬೆಂಗಳೂರು, ದಿನಾಂಕ: 06–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 121 ರನ್ವಯ ಯಾವ ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿ ಸಾಮಾನ್ಯ ಸದಸ್ಯತ್ವ ಹೊಂದಲು ಅವರ ಬೈಲಾದಲ್ಲಿ ನೌಕರರನ್ನು ಹೊರತುಪಡಿಸಿ, ಉಳಿದವರಿಗೆ ಅವಕಾಶ ಇಲ್ಲವೋ ಅಂತಹ ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಈ ಸಮಸ್ಯೆಗಳಿಂದ ಹಾಗೂ ಪರಿಸ್ಥಿತಿಯಿಂದ ಹೊರಬರಲು ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿನ ಸಹ ಸದಸ್ಯರನ್ನು ಒಟ್ಟು ಸಂಘದ ಸದಸ್ಯರ ಶೇಕಡಾ 15ಕ್ಕೆ ಮಿತಿಗೊಳಿಸುವ ಅವಕಾಶದ ಕಾಲಾವಧಿಯನ್ನು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕೆಳಕಂಡ ಷರತ್ತಿಗೊಳಪಟ್ಟು ಮುಂದಿನ ಆರು ತಿಂಗಳ ಅವಧಿಗೆ ವಿಸ್ತರಿಸಲು ಅನುಮೋದಿಸಿದೆ.

**ಷರತ್ತುಗಳು:**

1. ಈ ವಿನಾಯಿತಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಮಾತ್ರ ಅನ್ವಯಿಸುತ್ತದೆ.
2. ಈ ಆದೇಶವು ದಿನಾಂಕ: 06.03.2016 ರಿಂದ 6 ತಿಂಗಳ ಅವಧಿಗೆ ಮಾತ್ರ ಸೀಮಿತವಾಗಿದೆ.

**P.R.317**

**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## COMMERCE AND INDUSTRIES SECRETARIAT

**Sub :** Project proposal of M/s Karnataka Ferro Concentrates Pvt. Ltd., to establish "3.6 MTPA Pellet Feed Plant" at Sompur Village Sandur Taluk, Bellary District – request for Inclusion of 3.6 MTPA Pellet Feed Plant, Change of Village name as Somalapura instead of Sompur and land requirement from 196.51 acres to 277.36 acres as SUC through KIAD – Reg.

**Read :**
1) Proceedings of the 25th State High Level Clearance Committee (SHLCC) meeting held on 14.07.2011.
2) Government Order No. CI 196 SPI 2011, dated: 22.08.2011.
3) Proceedings of the 27th State High Level Clearance Committee (SHLCC) meeting held on 13.04.2012.
4) Government Order No. CI 196 SPI 2011, dated: 28.04.2012.
5) Proceedings of the 37th State High Level Clearance Committee (SHLCC) meeting held on 27.03.2015.
6) Government Order No. CI 196 SPI 2011, dated: 03.06.2015.
7) Proceedings of the 26th Land Audit Committee (LAC) meeting held on 30.01.2016.
8) Proceedings of the 43rd State High Level Clearance Committee (SHLCC) meeting held on 01.02.2016.

**Preamble:**

The project proposal of M/s Karnataka Ferro Concentrates Pvt. Ltd., to establish a "1.20 MTPA Iron Ore Pelletisation Plant" with an investment of ₹. 226 crores of Sompura Village, Sandur Taluk, Ballari District was approved in the 25th SHLCC meeting held on 14.07.2011 read of (1) above. Accordingly Government Order No. CI 196 SPI 2011, dated: 22.08.2011 was issued read at (2) above.

In the 27th SHLCC Meeting held on 13.04.2012, the Committee considered the enhancement of investment and power requirement as follows:

- To incorporate the enhancement of investment from ₹. 226 Crores to ₹. 358 Crores.
- Power requirement from 15,000 KVA to 18,000 KVA.

Further in the 37th SHLCC meeting held on 27.03.2015 Committee approved the following amendments for the project (and Order was issued on 03.06.2015).

- To increase cost of the project from Rs. 358.00 to Rs. 890 Crores.
- To increase the power requirement for 15 to 18 MVA to be supplied from GESCOM.
- To increase the land requirement from 196.51 Acres to 277.36 Acres.
- To increase the Water requirement from 400 KLD to 5000 KLD.

Now the company vide its letter 24.07.2015 requrested to amend the Government Order dated 03.06.2015 with the following:

- 3.6 MTPA Pellet Feed Plant in addition to 1.20 Iron Ore Pelletization Plant.
- Correction of Village name as Somalapur instead of Sompur.
- To increase the land requirement from 196.51 Acres to 277.36 Acres to acquired and allot from KIADB as SUC.
- To increase the Water requirement from 400 KLD to 5000 KLD from nearby Narihalla Reservoir & Raghavapur Tank.

The subject was discussed in the 20th Land Audit Committee meeting held on 03.09.2015, the Committee advised to obtain opinion from WRD on requirement of water.

The Secretary, Water Resources Department vide letter dated 29.01.2016 has informed that they have referred the matter to MD, Karnataka Niravari Nigama Ltd. and Chief Engineer, WRD for their opinion on availability of 5000 KLD (0.0645 TMC) of water from Raghavendra lake, Sandur Taluk, Ballari District.

The proposal of the company has been placed before the 26th LAC meeting held on 30.01.2016. The decision of the LAC is as follows:

The representatives of the company explained the expansion details of the project to the committee.

The Committee after detailed discussions recommended to SHLCC for approval of the following.

- Inclusion of 3.6 MTPA Pellet Feed Plant.
- Change of Village name as Somalapura instead of Sompur.
- Land requirement from 196.51 acres to 277.36 acres as SUC through KIADB.

The proposal was examined in the 43rd State High Level Clearance Committee (SHLCC) Meeting held on 01.02.2016. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 196 SPI 2011, BENGALURU, DATED: 10.03.2016.**

Government is pleased to accord approval for the following proposals of M/s Karnataka Ferro Concentrates Pvt. Ltd.,

- Inclusion of 3.6 MTPA Pellet Feed Plant.
- Change of Village name as Somalapura inslead of Sompur.
- Land requirement from 196.51 acres to 277.36 acres as SUC through KIADB.

All other terms and conditions indicated in the Government Order No. CI 196 SPI 2011, dated: 22.08.2011 read at (2) above, remain unaltered.

**PR. 293**
**SC. 25**

By Order and in the name of the Governor of Karnataka

**S. UMADEVI**

Desk Officer (Technical Cell)

Commerce & Industries Department

## COMMERCE AND INDUSTRIES SECRETARIAT

**Sub:** Project Proposal of M/s N.K. Utilities Ltd., to establish a "300 MW Coal Based Power Plant" at Achanur Village, Bagalkot District – Extension of time – Reg.

**Read:**
1) Proceedings of the16th and 20th State High Level Clearance Committee (SHLCC) meeting held on 19.11.2008 and 05.01.2010.
2) Government Order No. CI 261 SPI 2010, dated: 18.06.2010.
3) Proceedings of the 33rd State High Level Clearance Committee (SHLCC) meeting held on 19.11.2013.
4) Government Order No. CI 261 SPI 2010, dated: 06.01.2014.
5) Proceedings of the 22nd Land Audit Committee meeting held on 28.12.2015.
6) Proceedings of the 43rd State High Level Clearance Committee (SHLCC) meeting held on 01.02.2016.

**Preamble :**

The proposal of M/s N.K. Utilities Ltd., to establish a "300 MW Coal Based Power Plant" at Kagalagomba Village, Bagalkot District with an investment of Rs. 1740 crore, was approved in the 16th SHLCC meeting held on 19.11.2008. Subsequently in the 20th SHLCC meeting held on 05-01-2010 the committee approved to establish unit in 500 acres of land (225 acres U/s 109 of KLR Act and 275 acres from KIADB as SUC) and also approved for change of location to Achanur Village, Bagalkot District. The Government Order was issued vide Government Order No. CI 261 SPI 2010, dated: 18.06.2010 read at (2) above.

Further, 33rd SHLCC in its meeting held on 19.11.2013 accorded approval for extension of time to implement the project for further period of two years from 06.01.2014. Accordingly Government Order No. CI 261 SPI 2010, dated: 06.01.2014 cited at read (4) was issued.

Now, the company vide letter dated: 26.08.2015 has requested to grant extension of time and informed that the acquisition of land to the extent 63.05 acres through KIADB from land owners, the land owners have gone to High Court Dharwad challenging the acquisition process of the State Government and KIADB. However due to earlier cases this is still pending for disposal. The land acquisition by KIADB are in between the lands which have already acquired under 109 of KLR Act to the extent of 180.09 acres (which is required for the project). Unless they get total lands they can not start the project. This will take 27 to 30 months time. Further they have informed the following progress made:

- State Level Environment Impact Assessment Authority has issued EC.
- CFE obtained from KSPCB.
- Coal has been tied up with M/s Fajar Bumi Sakti Ltd., Indonesia and contract agreement has been signed.
- Water allocation has been obtained.
- Railway survey, Contour survey, water line survey, power evacuation line survey has been completed.

The proposal of the company has been placed before the 22nd LAC meeting held on 28.12.2015. The decision of the LAC is as follows:

The representatives of the company explained the committee that, the acquisition of 63.05 acres of land through KIADB has been delayed due to the land owners have challenged the land acquisition process in the Hon'ble High Court and unless they get land possession they are unable to start the project and requested extension of time by 5 years to implement the project.

The Committee noted the above and informed MD, KUM to send a proposal to Commerce & Industries Department for grant of 3 years of extension of time to implement the project as decided at Sub. No. 3.5.

The proposal was examined in the 43rd State High Level Clearane Committee (SHLCC) Meeting held on 01.02.2016. Government has examined the recommendations made by the State High Level Clearance Committee in all aspects.

Hence the following order.

**GOVERNMENT ORDER No. CI 261 SPI 2010, BENGALURU, DATED: 09.03.2016.**

The Government is pleased to grant extension of time to M/s N.K. Utilities Ltd., to implement the project approved vide Government Order No. CI 261 SPI 2010, dated: 18.06.2010 for further period of two years from the date of issue of this order.

All other terms and conditions indicated in the Government Order dated: 18.06.2010 read at (2) above, remain unaltered.

**PR. 294**
**SC. 25**

By Order and in the name of the Governor of Karnataka

**S. UMADEVI**
Desk Officer (Technical Cell)
Commerce & Industries Department.

## COMMERCE AND INDUSTRIES SECRETARIAT

**Sub :** Project proposal of M/s Cornerstone Shelters Pvt. Ltd., to establish "Infotech / Hardware / Bio-Tech Park with Common Facilities" at various Sy. Nos. of Mojemachappana Hosahalli Village, Chikkajala Hobli, Devanahalli Taluk, Bengaluru Rural District – Extension of time – Reg.

**Read :**
1) Proceedings of the 15th State High Level Clearance Committee (SHLCC) meeting held on 21.08.2008.
2) Government Order No. ITD 66 MDA 2008, dated: 30.10.2008.
3) Proceedings of the 25th Land Audit Committee (LAC) meeting held on 29.01.2016.
4) Proceedings of the 43rd State High Level Clearance Committee (SHLCC) meeting held on 01.02.2016.

**Preamble:**

The project proposal of M/s Cornerstone Shelters Pvt. Ltd., to establish "Infotech / Hardware / Bio-Tech Park with Common Facilities" in 200 acres of land at Mojemachappana Hosahalli Village, Chikkajala Hobli, Devanahalli Taluk, Bengaluru Rural District with an investment of ₹. 1600 crores was approved by the 15th SHLCC meeting held on 21.08.2008. The Government Order was issued vide Government Order No. ITD 66 MDA 2008. Dated: 30.10.2008 read at (2) above.

Now, the company informed that, they have applied to KIADB for acquisition of land and submitted consents of 80% of land owners. KIADB has issued demand note for deposit of 40% of land cost and the company is yet to pay the same.

They have requested extension of time to implement the project up to 2026 and the following assistance:

- Land to be acquired and allotted with the right for alienation as the land will be used for Office, Research Space, Residential Space and the clients would like to own the land for their requirement.
- 80% of the landowners have given consent letter stating that, they do not require any further compensation as the same is already received. Hence, award may be passed by KIADB in consonance with this by collecting only service charges. They have informed that, SHLCC have permitted similar facility for one of their Partner Company viz M/s Anamitra Warehousing Pvt. Ltd. Vide GO No. CI 270 SPI 2009, Bengaluru dated: 29.10.2009. The said Government Order reads as follows, "…KIADB to acquire the land by collecting only the service charges as the compensation to the land owners will be directly paid by the company where ever the consent is produced…"
- They may be permitted to deposit 20% of the fees to be paid to KAIDB initially, 30% of the stage of final notification and the balance 50% at the time of handing over the land.
- Special Package of Incentives and Concessions under New Industrial Policy 2014-19 considering the project as Super Mega Project.

The proposal of the company has been placed before the 25th LAC meeting held on 29.01.2016. The decision of the LAC is as follows:

The representatives of the company explained the steps taken to implement the project. They have informed that they have applied to KIADB for acquisition of land and submitted consents of 80% of land owners.

Now they have requested for extension of time to implement the project and with the following assistance.

- Land to be acquired and allotted with the right for alienation.
- KIADB to acquire and allot the land collecting service charges wherever consent of land owners are produced.
- Permission to deposit 20% of the fees to be paid to KIADB initially, 30% at the stage of final notification and the balance 50% at the time of handling over the land.
- Special Package of Incentives and Concessions under New Industrial Policy 2014-19.

The Committee noted the above and informed that:

- As per the prevailing land allotment policy of KIADB, land will be allotted only on 99 years lease, hence, their request for allotment of land with the right for alienation cannot be considered.
- The request for staggered payment to KIADB also cannot be considered and they have to pay the same as and when it is demanded.

After detailed discussion, the Committee resolved to recommend to SHLCC to consider the following requests of the company:

- Grant extension of time for implementation of the project by 3 years.
- KIADB to acquire the land for the project by collecting the service charges wherever consent of landowner is produced and subject to the condition that the company has to produce a valid undertaking/declaration of the landowner to KIADB.
- Sanction of incentives and concessions as per Karnataka IT/BT Policy.

The proposal was examined in the 43rd State High Level Clearance Committee (SHLCC) Meeting held on 01.02.2016. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 300 SPI 2012, BENGALURU, DATED: 09.03.2016.**

Government is pleased to accord approval for the following proposals of M/s Cornerstone Shelters Pvt. Ltd.,

- Grant extension of time for implementation of the project by 3 years.
- KIADB to acquire the land for the project by collecting the service charges wherever consent of landowner is produced and subject to the condition that the company has to produce a valid undertaking/declaration of the landowner to KIADB.
- Incentives and concessions as per Karnataka IT/BT Policy.

All other terms and conditions indicated in the Government Order No. ITD 66 MDA 2008, dated: 30.10.2008 read at (2) above, remain unaltered.

**PR. 295** By Order and in the name of the Governor of Karnataka

**SC. 25** **S. UMADEVI**

Desk Officer (Technical Cell)

Commerce & Industries Department

## COMMERCE AND INDUSTRIES SECRETARIAT

**Sub :** Project Proposal of M/s Vasavadatta Cement (Prop. of M/s Kesoram Industries Ltd., Kalaburagi) to establish a unit for manufacture of "4.50 MTPA Portland Cement and 50 MW of Power" at Malkhed Village. Sedam Taluk, Kalaburagi District – Extension of time - Reg.

**Read :**
1) Proceedings of the 26th State High Level Clearance Committee (SHLCC) meeting held on 09.11.2011.
2) Government Order No. CI 282 SPI 2011, dated: 16.12.2011
3) Proceeding of the 22nd Land Audit Committee (LAC) meeting held on 28.12.2015.
4) Proceedings of the 43rd State High Level Clearance Committee (SHLCC) meeting held on 01.02.2016.

**Preamble:**

The project proposal of Vasavadatta Cement (Prop. of M/s Kesoram Industries Ltd., Kalaburagi) to establish a unit for manufacture of "4.50 MTPA Portland Cement and 50 MW of Power" with an investment of ₹. 1600 crores in 1166 acres 27 Guntas of land for Plant and 2434 Acres 29 Guntas of land form mining area at Malkhed Village, Sedam Taluk, Kalaburagi District, generating employment to about 800 persons was approved in the 26th SHLCC meeting held on 09.11.2011. Accordingly Government Order No. CI 282 SPI 2011, dated: 16.12.2011 was issued as referred at (2) above.

Now, the company vide its letter dated: 01.10.2015 has informed that, to cater the requirement of limestone for the project, they have applied for Mining Lease of 2293.34 acres vide application No. VC:WS:MINES:ML/2010-11 dated 17.12.2010 which is still pending with Government and hence could not taken up any activities like obtaining MOEF clearance, land acquisition etc. Further they have informed that, they can take up these activities only after receipt of Mining Lease.

In view of the above, company has requested to extend the validity of Government Order for further period of 4 years to implement the project.

The proposal of the company has been placed before the 22nd LAC meeting held on 28.12.2015. The decision of the LAC is as follows:

The representatives of the company explained the committee that, their application for mining lease is pending with Government and hence could not take up any effective steps like land acquisition and obtaining other clearances for the project. They have requested extension of time by 4 years to implement the project.

The Committee noted the above and informed MD, KUM to send a proposal to Commerce & Industries Department for grant of 2 years of extension of time to implement the project as decided at Sub. No. 3.5

The proposal was examined in the 43rd State High Level Clearance Committee (SHLCC) Meeting held on 01.02.2016. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 282 SPI 2011, BENGALURU, DATED: 08.03.2016.**

The Government is pleased to grant extension of time to M/s Vasavadatta Cement (Prop. of M/s Kesoram Industries Ltd., Kalaburagi) to implement the project approved vide Government Order No. CI 282 SPI 2011, dated: 16.12.2011 for further period of two years from the date of issue of this order.

All other terms and conditions indicated in the Government Order dated: 16.12.2011 read at (2) above, remain unaltered.

**PR. 296** By Order and in the name of the Governor of Karnataka

**SC. 25** **S. UMADEVI**

Desk Officer,(Technical Cell)

Commerce & Industries Department

## COMMERCE AND INDUSTRIES SECRETARIAT

**Sub :** Project proposal of M/s Udupi Power Corporation Ltd., to establish 2800 MW Thermal Power Plant at Yelluru and Santur Villages, Udupi District – request to acquire and allot additional 278 acre of land by KIADB.

**Read :**

1) Proceedings of the 23rd State High Level Clearance Committee (SHLCC) meeting held on 19.06.2010.
2) Government Order No. CI 366 SPI 2010, dated: 15.07.2010.
3) Proceedings of the 33rd State High Level Clearance Committee (SHLCC) meeting held on 19.11.2013.
4) Government Order No. CI 366 SPI 2010, dated: 09.01.2014.
5) Proceedings of the 42nd State High Level Clearance Committee (SHLCC) meeting held on 04.01.2016.
6) Government Order No. CI 366 SPI 2010, dated: 21.01.2016.
7) Proceedings of the 23rd Land Audit Committee (LAC) meeting held on 08.01.2016.
8) Proceedings of the 43rd State High Level Clearance Committee (SHLCC) meeting held on 01.02.2016.

**Preamble:**

The proposal of M/s Udupi Power Corporation Ltd., to establish a "2X660 MW Thermal Power Plant" at Yelluru Village, Udupi District with an investment of ₹. 6.930.00 crore, was approved in the 23rd SHLCC meeting held on 19.06.2010. The Government Order was issued vide Government Order No. CI 366 SPI 2010, dated: 15.07.2010 read at (2) above.

Further, the subject for extension of time was placed in 33rd SHLCC meeting held on 19.11.2013 and extension of time was accorded upto 08.01.2016, vide Government Order No. CI 366 SPI 2010, dated: 09.01.2014 read at (4) above.

Further, the subjects for approval to acquire M/s Udupi Power Corporation (UPCL) by M/s Adani Power Ltd. (APL) (UPCL is 100% subsidiary of APL), extension of time for the project by 3 years and increase the capacity of power plant from 1200 MW to 2800 MW with indicative additional investment of ₹. 4570.00 Crores subject to verification of the cost estimates by the electricity regulator was approved in the 42nd SHLCC meeting held on 04.01.2016. Accordingly, Government Order vide Government Order No. CI 366 SPI 2010, dated: 21.01.2016 was issued at read (6) above.

The company vide their letter dated: 21.01.2016 have requested for additional land of 278 acres in various Sy. Nos. as below at Santur Village, adjacent to the existing plant required for Ash Dyke area.

The company vide their letter dated: 05.01.2016 and 06.01.2016 have informed that presently the company has utilized 650 acres of land for 1200 MW Thermal Power. The company has requested for additional allotment of 278 acres of land in Santur Village of Udupi Taluk for proposed expansion plan from 1200 to 2800 MW adjacent to the existing location. It is informed that the lands are under 28(1) notification by KIADB. Land to an extent of 503.25 acres are notified by KIADB U/s 28(4).

The company has informed in their letters, that the additional lands are required for the following activities:

a) Sea water intake system, railway corridor and R & R Colony : 80 acres
b) Ash dump area : 125 acres
c) Staff colony : 25 acres
d) Expansion plan with addition of 2 X 800 MW instead of 2X660 : 48 acres

| Details of Land in Santur Village – 278 Acres | | | | | |
|---|---|---|---|---|---|
| **Sl. No.** | **Survey Number** | **Extent** | **Sl. No.** | **Survey Number** | **Extent** |
| **1** | **2** | **3** | **4** | **5** | **6** |
| 1 | 162 | 8.9 | 21 | 127 | 6.76 |
| 2 | 163 | 10.85 | 22 | 124P | 6.38 |
| 3 | 161 | 6.2 | 23 | 126P | 5.67 |

| 1 | 2 | 3 | 4 | 5 | 6 |
|---|---|---|---|---|---|
| 4 | 160 | 12.38 | 24 | 120 | 12.1 |
| 5 | 159 | 10.92 | 25 | 34 | 8.45 |
| 6 | 167 | 14.92 | 26 | 35 | 8.23 |
| 7 | 165 | 7.83 | 27 | 33 | 3.46 |
| 8 | 166 | 9.42 | 28 | 31 | 3.71 |
| 9 | 175 | 4.87 | 29 | 30 | 1.81 |
| 10 | 174 | 8.76 | 30 | 32 | 5.15 |
| 11 | 173 | 8.46 | 31 | 29 | 4.85 |
| 12 | 168 | 3.91 | 32 | 28 | 4.38 |
| 13 | 169 | 6.42 | 33 | 14 | 3.66 |
| 14 | 141 | 11.68 | 34 | 121 | 8.03 |
| 15 | 171 | 10.78 | 35 | 125 | 16.94 |
| 16 | 140 | 6.54 | 36 | 13 | 3.6 |
| 17 | 138 | 5.98 | 37 | 15 | 2.72 |
| 18 | 137 | 5.66 | 38 | 24 | 2 |
| 19 | 128 | 9.89 | | | |
| 20 | 129P | 5.87 | | | |
| | | | | **Total** | **278.14** |

Letter addressed to the Director, Department of Fisheries was sent on 12.01.2016 seeking opinion on the additional requirement of water of 337 MLPD from Sea. The Department of Fisheries have vide their letter dated 19.1.2016 have opined that "additional sea water may be drawn to the condition that discharged water should not be harmful to the surrounding eco system and fish fauna and flora and should not affect fishing activities in that region".

In response to letter sent of 07.01.2016 to KIADB seeking opinion on the request of the company for acquisition and allotment of additional 278 acres of land in Yelluru and Santur Villages, adjacent to the existing plant, KIADB vide their letter dated 13.01.2016 have opined as follows:

"The request of the company may be considered for acquisition of additional land in Yellur and Santur Villages of Udupi Taluk and District to an extent of 278 acres of land out of 1330 acres of land notified U/s 28(1) in the year 20.01.1995 and also new acquisition as per the company's request".

The proposal of the company has been placed before the 23rd LAC meeting held on 08.01.2016. The decision of the LAC is as follows:

The representative of the company explained the committee that, the expansion plan of the company to increase the power generation capacity from 1200 to 2800 MW was approved in the 42nd SHLCC meeting held on 04.01.2016 and to establish the expansion activities they need additional 278 acres of land. They have requested KIADB to acquire and allot the land.

The committee after detailed discussion resolved to recommend to SHLCC to consider the company's request for acquisition and allotment of 278 acres of land for the project from KIADB as per board norms.

The proposal was examined in the 43rd State High Level Clearance Committee (SHLCC) Meeting held on 01.02.2016. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 366 SPI 2010, BENGALURU, DATED: 03.03.2016.**

The Government is pleased to permit M/s Udupi Power Corporation Ltd., to acquire and allot 278 acres of additional land for the project from KIADB as per board norms excluding SC/ST, Grant and Government lands.

All other terms and conditions indicated in the Government Order No. CI 366 SPI 2010, dated: 15.07.2010 read at (2) and 21.01.2016 read at (6) above, remain unaltered.

**PR. 297**
**SC. 25**

By Order and in the name of the Governor of Karnataka

**S. UMADEVI**

Desk Officer,(Technical Cell)

Commerce & Industries Department

## ಆರ್ಥಿಕ ಸಚಿವಾಲಯ

**ವಿಷಯ :** ಲಾಟರಿ ಹಾವಳಿಯನ್ನು ನಿಯಮಗಳ ಚೌಕಟ್ಟಿನಲ್ಲಿಯೇ ನಿಯಂತ್ರಿಸಲು ಫ್ಲೈಯಿಂಗ್ ಸ್ಕ್ವಾಡ್ ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಆಇ 199 ಸಉಲಾ 2004, ದಿನಾಂಕ: 25.11.2005.

2. ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 22 ಸಉಲಾ 2006, ದಿನಾಂಕ: 27.03.2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಅನಧಿಕೃತ ನಕಲಿ ಲಾಟರಿ ನಿಷೇಧಕ್ಕೂ ಮುನ್ನ ಕರ್ನಾಟಕ ರಾಜ್ಯದಲ್ಲಿ ಅನಧಿಕೃತ ನಕಲಿ ಲಾಟರಿ ಹಾಗೂ ಅನಧಿಕೃತ ಮಟ್ಕಾ ಹಾವಳಿಯನ್ನು ನಿಯಂತ್ರಿಸುವ ಭಾರತ ಸಂವಿಧಾನದ ಅನುಚ್ಛೇದ 162ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುವ ಮೂಲಕ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯ ಜಿಲ್ಲೆಯ ಸಹಾಯಕ ನಿರ್ದೇಶಕರುಗಳು, ಸರ್ಕಲ್ ಇನ್ಸ್‌ಪೆಕ್ಟರ್ ಆಫ್ ಪೋಲೀಸ್, ಜಾರಿಗೊಳಿಕೆ ವಿಭಾಗದ ವಾಣಿಜ್ಯ ತೆರಿಗೆ ಅಧಿಕಾರಿಗಳನ್ನೊಳಗೊಂಡ ಫ್ಲೈಯಿಂಗ್ ಸ್ಕ್ವಾಡ್ ರಚಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯವನ್ನು ಲಾಟರಿ ಮುಕ್ತ ವಲಯವನ್ನಾಗಿ ದಿ:01.04.2007ರಿಂದ ಜಾರಿಗೆ ಬರುವಂತೆ ಘೋಷಿಸಲಾಗಿದೆ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿ:19.08.2015ರಂದು ನಡೆದ ಸಭೆಯಲ್ಲಿ ಲಾಟರಿ ವಿಷಯಕ್ಕೆ ಸಂಬಂಧಿಸಿದಂತೆ ಆಡಳಿತಾತ್ಮಕ ವಿಷಯವನ್ನು ಆರ್ಥಿಕ ಇಲಾಖೆಯು ನಿರ್ವಹಿಸಬೇಕು ಮತ್ತು ಅಕ್ರಮ ಲಾಟರಿ ದಂಧೆ ಹಾಗೂ ಅದಕ್ಕೆ ಸಂಬಂಧಪಟ್ಟ ಪ್ರಕರಣಗಳ ವಿಷಯವನ್ನು ಒಳಾಡಳಿತ ಇಲಾಖೆಯು ನಿರ್ವಹಿಸಬೇಕೆಂದು ತೀರ್ಮಾನಿಸಲಾಯಿತು, ಅದಕ್ಕನುಸಾರವಾಗಿ ಅಪರಾಧಿಕ ಕಾನೂನು ವಿಷಯಾಂಶವನ್ನು ಒಳಾಡಳಿತ ಇಲಾಖೆಯು ನಿರ್ವಹಿಸುವುದು ಹಾಗೂ ಲಾಟರಿ ವಿಷಯವು ಆರ್ಥಿಕ ಇಲಾಖೆಯಲ್ಲಿಯೇ ಉಳಿಯುತ್ತದೆ.

ಲಾಟರಿ (ರೆಗ್ಯೂಲೇಷನ್) ಆಕ್ಟ್, 1998ರ ಅಡಿ ರಾಜ್ಯ ಸರ್ಕಾರವು ದಿ:08.09.2000ರಂದು ಕರ್ನಾಟಕ ರಾಜ್ಯ ಲಾಟರಿ ನಿಯಮಾವಳಿಗಳು 1999 ರಲ್ಲಿನ ನಿಯಮ 20(2)ರ ಅನ್ವಯ ಇತರೇ ರಾಜ್ಯಗಳು, ಕೇಂದ್ರಾಡಳಿತ ಪ್ರದೇಶಗಳು ಮತ್ತು ದೇಶಗಳು ಕೆಲವು ದಾಖಲೆಗಳನ್ನು ಲಾಟರಿ ನಿರ್ದೇಶಕರಿಗೆ ಲಾಟರಿ ನಡೆಸಲು ಸಲ್ಲಿಸಬೇಕಾಗಿದ್ದು, ಇದು ಲಾಟರಿ ನಿರ್ದೇಶಕರಿಗೆ ಸ್ವಲ್ಪ ಮಟ್ಟಿನ ನಿಯಂತ್ರಣ ಮೇಲ್ವಿಚಾರಣೆಯ ಅವಕಾಶವನ್ನು ನೀಡಿದ್ದು, ಈ ಮೇಲ್ವಿಚಾರಣೆಯನ್ನು ಜಾರಿಗೊಳಿಸುವುದು ರಾಜ್ಯ ಲಾಟರಿ ಇಲಾಖೆಯ ಹೊಣೆಯಾಗಿರುವುದರಿಂದ, ಜಿಲ್ಲಾ ಮಟ್ಟದ ಫ್ಲೈಯಿಂಗ್ ಸ್ಕ್ವಾಡ್‌ನ್ನು ಪುನರ್‌ರಚಿಸಲು ಉದ್ದೇಶಿಸಲಾಗಿದೆ. ಇದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಆಇ 01 ಸಉಲಾ 2015, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವು ಅನಧಿಕೃತ ನಕಲಿ ಲಾಟರಿ ಹಾಗೂ ಅನಧಿಕೃತ ಮಟ್ಕಾ ಹಾವಳಿಯನ್ನು ನಿಯಂತ್ರಿಸುವ ಸಲುವಾಗಿ ಭಾರತ ಸಂವಿಧಾನದ ಅನುಚ್ಛೇದ 162ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುವ ಮೂಲಕ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ಸದಸ್ಯರನ್ನೊಳಗೊಂಡ ಜಿಲ್ಲಾ ಮಟ್ಟದ ಫ್ಲೈಯಿಂಗ್ ಸ್ಕ್ವಾಡ್‌ನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು | ಸದಸ್ಯರು |
| 3. | ಸಂಬಂಧಪಟ್ಟ ಪ್ರದೇಶದ ಇನ್‌ಛಾರ್ಜ್ ಜಾರಿಗೊಳಿಕೆ ವಿಭಾಗದ ವಾಣಿಜ್ಯ ತೆರಿಗೆ ಅಧಿಕಾರಿಗಳು | ಸದಸ್ಯರು |
| 4. | ಸಹಾಯಕ ನಿರ್ದೇಶಕರು– ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆ | ಸದಸ್ಯ ಸಮಾವೇಶಕರು |

ಫ್ಲೈಯಿಂಗ್ ಸ್ಕ್ವಾಡ್ ಕಡ್ಡಾಯವಾಗಿ ತ್ರೈಮಾಸಿಕ ಸಭೆ ಸೇರುವಂತೆ ಸೂಚಿಸಲಾಗಿದೆ.

**PR. 163**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.(ಆಡಳಿತ ಮತ್ತು ಮುಂಗಡಗಳು)

## ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ :** ಕೃಷಿ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ರೇಷ್ಮೆ ನಿರೀಕ್ಷಕರುಗಳ ಸೇವೆಯನ್ನು ರೇಷ್ಮೆ ಇಲಾಖೆಗೆ ಹಿಂದಕ್ಕೆ ಪಡೆಯುವ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ತೋಇ 130 ರೇಇವಿ 2013, ದಿನಾಂಕ: 20–12–2013.

2) ಸರ್ಕಾರದ ಪತ್ರ ಸಂಖ್ಯೆ:ತೋಇ 130 ರೇಇವಿ 2013, ದಿನಾಂಕ: 12–03–2014.

3) ಸರ್ಕಾರದ ಪತ್ರ ಸಂಖ್ಯೆ:ತೋಇ 130 ರೇಇವಿ 2013, ದಿನಾಂಕ: 29–04–2015.

4) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1(8): ರೇಪ್ರದ:ಎಕ:42:13–14 (ಭಾಗ–1), ದಿನಾಂಕ: 13/18–08–2015

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ದಿನಾಂಕ 20–12–2013ರ ಆದೇಶದಲ್ಲಿ ರೇಷ್ಮೆ ಇಲಾಖೆಯಲ್ಲಿ ಅಧಿಕವಾಗಿರುವ 320 ರೇಷ್ಮೆ ನಿರೀಕ್ಷಕರುಗಳನ್ನು ಅವರು ಹೊಂದಿರುವ ವೇತನ ಶ್ರೇಣಿ ಮೇಲೆ ಕೃಷಿ ಇಲಾಖೆಯಲ್ಲಿನ ಸಹಾಯಕ ಕೃಷಿ ಅಧಿಕಾರಿ ಹುದ್ದೆಗೆ 02 ವರ್ಷಗಳ ಅವಧಿಗೆ ಪ್ರತಿ ನಿಯೋಜಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 12.03.2014ರ ಪತ್ರದಲ್ಲಿ ಕೃಷಿ ಇಲಾಖೆಯಲ್ಲಿ ಪ್ರತಿನಿಯೋಜನೆ ಮೇಲಿರುವ ಸಂಘದ ಪದಾಧಿಕಾರಿಗಳು ಸಂಘದ ಕಾರ್ಯಚಟುವಟಿಕೆಗಳಲ್ಲಿ ತೊಡಗಿರುವ ಮೇರೆಗೆ ಹಾಗೂ ಕೆಲವು ರೇಷ್ಮೆ ನಿರೀಕ್ಷಕರುಗಳನ್ನು ವೈದ್ಯಕೀಯ ಕಾರಣಗಳ ಹಿನ್ನೆಲೆಯಲ್ಲಿ ಪ್ರತಿನಿಯೋಜನೆಯನ್ನು ರದ್ದುಪಡಿಸಿ 07 ಮಂದಿ ರೇಷ್ಮೆ ನಿರೀಕ್ಷಕರುಗಳ ಸೇವೆಯನ್ನು ಮಾತೃ ಇಲಾಖೆಯಾದ ರೇಷ್ಮೆ ಇಲಾಖೆಗೆ ಹಿಂದಕ್ಕೆ ಪಡೆದು ರೇಷ್ಮೆ ಇಲಾಖೆಯಲ್ಲಿ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರಿಸಲು ಅಗತ್ಯ ಕ್ರಮಕೈಗೊಳ್ಳುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ನಿರ್ದೇಶನ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 29–04–2015ರ ಪತ್ರದಲ್ಲಿ ರೇಷ್ಮೆ ಇಲಾಖೆಯಲ್ಲಿ ತಾಂತ್ರಿಕವಾಗಿ ಕ್ಷೇತ್ರಮಟ್ಟದಲ್ಲಿ ವಿಸ್ತರಣಾ ಕಾರ್ಯ ಹಾಗೂ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ ತಾಂತ್ರಿಕ ಸಿಬ್ಬಂದಿಗಳ ಕೊರತೆ ಇರುವುದರಿಂದ ಹಾಗೂ ತಾಂತ್ರಿಕ ಸಿಬ್ಬಂದಿಗಳು ವಯೋ ನಿವೃತ್ತಿ ಹೊಂದುತ್ತಿರುವುದರಿಂದ ಇಲಾಖೆಯ ಅಭಿವೃದ್ಧಿ ದೃಷ್ಟಿಯ ಹಿನ್ನೆಲೆಯಲ್ಲಿ ಕೃಷಿ ಇಲಾಖೆ ಹಾಗೂ ಇತರೆ ಇಲಾಖೆಗಳಲ್ಲಿ ಪ್ರತಿನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ 42 ಮಂದಿ ನೌಕರರ ಸೇವೆಯನ್ನು ಹಿಂದಕ್ಕೆ ಪಡೆಯಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ದಿನಾಂಕ: 13/18–08–2015ರ ಪತ್ರದಲ್ಲಿ ರೇಷ್ಮೆ ಇಲಾಖೆಯಲ್ಲಿ ವಯೋ ನಿವೃತ್ತಿ ಹೊಂದಿರುವ/ಹೊಂದುವವರ ಸಂಖ್ಯೆ: ಹೆಚ್ಚಿದ್ದು, ರೇಷ್ಮೆ ನಿರೀಕ್ಷಕರ ಹುದ್ದೆಗಳು ಖಾಲಿ ಇರುತ್ತವೆ. ಇದರಿಂದ ತಾಂತ್ರಿಕವಾಗಿ ಕ್ಷೇತ್ರಮಟ್ಟದಲ್ಲಿ ವಿಸ್ತರಣಾ ಕಾರ್ಯ ಹಾಗೂ ಸರ್ಕಾರದ ರೇಷ್ಮೆ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಿಬ್ಬಂದಿಗಳ ಕೊರತೆ ಉಂಟಾಗಿರುತ್ತದೆ. ಆದ್ದರಿಂದ ರೇಷ್ಮೆ ಇಲಾಖೆಗೆ ಹಿಂದಿರುಗಲು ಇಚ್ಚಿಸಿರುವ/ನಿಯೋಜನೆ ಮೇಲಿರುವ ರೇಷ್ಮೆ ನಿರೀಕ್ಷಕರುಗಳನ್ನು ಹಿಂಪಡೆದು ಇವರುಗಳ ಸೇವೆಯ ಅನುಭವನವನ್ನು ಇಲಾಖೆಯಲ್ಲಿ ಸಮಗ್ರವಾಗಿ ಬಳಸಿಕೊಳ್ಳಲು ಕೃಷಿ ಮತ್ತು ಇತರೆ ಇಲಾಖೆಗಳಲ್ಲಿ ನಿಯೋಜನೆ ಮೇಲಿರುವ ಉನ್ನತೀಕೃತ ರೇಷ್ಮೆ ನಿರೀಕ್ಷಕರುಗಳ ಸೇವೆಯನ್ನು ರೇಷ್ಮೆ ಇಲಾಖೆಗೆ ಹಿಂಪಡೆಯುವ ಕುರಿತು ಆದೇಶ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಗೆ ತಾಂತ್ರಿಕ ಸಿಬ್ಬಂದಿಗಳ ಸೇವೆಯು ಇಲಾಖೆಯ ಅಭಿವೃದ್ಧಿಗಾಗಿ ಅಗತ್ಯವಾಗಿರುತ್ತದೆ. ಕೃಷಿ ಇಲಾಖೆಗೆ ನಿಯೋಜಿಸಿರುವ ರೇಷ್ಮೆ ನಿರೀಕ್ಷಕರುಗಳ ಅವಧಿಯು ಸಹ ಮುಕ್ತಾಯಗೊಳ್ಳುವುದರಿಂದ, ರೇಷ್ಮೆ ಇಲಾಖೆಯಲ್ಲಿ ತಾಂತ್ರಿಕವಾಗಿ ಕ್ಷೇತ್ರಮಟ್ಟದಲ್ಲಿ ವಿಸ್ತರಣಾ ಕಾರ್ಯ ಹಾಗೂ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ ತಾಂತ್ರಿಕ ಸಿಬ್ಬಂದಿಗಳ ಕೊರತೆ ಇರುವುದರಿಂದ ಹಾಗೂ ತಾಂತ್ರಿಕ ಸಿಬ್ಬಂದಿಗಳು ವಯೋ ನಿವೃತ್ತಿ ಹೊಂದುತ್ತಿರುವುದರಿಂದ ಇಲಾಖೆಯ ಅಭಿವೃದ್ಧಿ ದೃಷ್ಟಿಯ ಹಿನ್ನೆಲೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಗಮನದಲ್ಲಿರಿಸಿಕೊಂಡು ಕೃಷಿ ಇಲಾಖೆಯಲ್ಲಿ ನಿಯೋಜನೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ರೇಷ್ಮೆ ನಿರೀಕ್ಷಕರುಗಳ ಸೇವೆಯನ್ನು ಮಾತೃ ಇಲಾಖೆಯಾದ ರೇಷ್ಮೆ ಇಲಾಖೆಗೆ ಹಿಂದಕ್ಕೆ ಪಡೆಯಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ತೋಇ 130 ರೇಇವಿ 2013, ಬೆಂಗಳೂರು, ದಿನಾಂಕ: 12–02–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರೇಷ್ಮೆ ಇಲಾಖೆಗೆ ತಾಂತ್ರಿಕ ಸಿಬ್ಬಂದಿಗಳ ಸೇವೆಯು ಇಲಾಖೆಯ ಅಭಿವೃದ್ಧಿಗಾಗಿ ಅಗತ್ಯವಾಗಿರುತ್ತದೆ. ಕೃಷಿ ಇಲಾಖೆಗೆ ನಿಯೋಜಿಸಿರುವ ರೇಷ್ಮೆ ನಿರೀಕ್ಷಕರುಗಳ ಅವಧಿಯು ಸಹ ಮುಕ್ತಾಯಗೊಳ್ಳುವುದರಿಂದ, ರೇಷ್ಮೆ ಇಲಾಖೆಯಲ್ಲಿ ತಾಂತ್ರಿಕವಾಗಿ ಕ್ಷೇತ್ರಮಟ್ಟದಲ್ಲಿ ವಿಸ್ತರಣಾ ಕಾರ್ಯ ಹಾಗೂ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕೆ ತಾಂತ್ರಿಕ ಸಿಬ್ಬಂದಿಗಳ ಕೊರತೆ ಇರುವುದರಿಂದ ಹಾಗೂ ತಾಂತ್ರಿಕ ಸಿಬ್ಬಂದಿಗಳು ವಯೋ ನಿವೃತ್ತಿ ಹೊಂದುತ್ತಿರುವುದರಿಂದ ಇಲಾಖೆಯ ಅಭಿವೃದ್ಧಿ ದೃಷ್ಟಿಯ ಹಿನ್ನೆಲೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಗಮನದಲ್ಲಿರಿಸಿಕೊಂಡು ಕೃಷಿ ಇಲಾಖೆಯಲ್ಲಿ ನಿಯೋಜನೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ರೇಷ್ಮೆ ನಿರೀಕ್ಷಕರುಗಳ ಸೇವೆಯನ್ನು ಮಾತೃ ಇಲಾಖೆಯಾದ ರೇಷ್ಮೆ ಇಲಾಖೆಗೆ ಹಿಂದಕ್ಕೆ ಪಡೆಯಲು ಸರ್ಕಾರವು ಆದೇಶಿಸಿದೆ.

ಕೃಷಿ ಇಲಾಖೆಯಿಂದ ಹಿಂದಕ್ಕೆ ಪಡೆದಂತ ರೇಷ್ಮೆ ನಿರೀಕ್ಷಕರುಗಳ ಸ್ಥಳ ನಿಯುಕ್ತಿಗಾಗಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.

**PR. 164**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಲ್.ಚಿನ್ನಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ)
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಶ್ರೀ ಎಲ್. ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು, ಇವರ ಅಮಾನತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ :**

1) ಆದೇಶ ಸಂಖ್ಯೆ: ಇಎನ್ 160 ಇಬಿಎಸ್ 2010, ದಿನಾಂಕ: 19–02–2011.
2) ಆದೇಶ ಸಂಖ್ಯೆ: ಇಎನ್ 160 ಇಬಿಎಸ್ 2010, ದಿನಾಂಕ: 25–05–2011.
3) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ ಕ್ರೈಂ.63./2010, ದಿನಾಂಕ: 05.02.2011 (ತನಿಖಾ ವರದಿ).
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 59 ಇಬಿಎಸ್ 2011, ದಿನಾಂಕ: 28.03.2013.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 59 ಇಬಿಎಸ್ 2011, ದಿನಾಂಕ: 03.07.2014.
6) ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ: 07.04.2015ರ ಆದೇಶ.

ಪ್ರಸ್ತಾವನೆ :

1. ಶ್ರೀ ಎಲ್.ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು, ಇವರು ಉಪ ವಿದ್ಯುತ್ ಪರಿವೀಕ್ಷಕರಾಗಿ ಕೇಂದ್ರೀಯ ಉಪವಿಭಾಗ, ಬೆಂಗಳೂರು ಪೂರ್ವ ವಲಯ, ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಮಲ್ಲೇಶ್ವರಂ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ವಿದ್ಯುತ್ ಕಾಮಗಾರಿಯ ಪರಿವರ್ತಕದ ಅನುಮೋದನೆಯನ್ನು ನೀಡಲು ಅರ್ಜಿದಾರರಿಂದ ಲಂಚ ಸ್ವೀಕರಿಸುವಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ಸಿಕ್ಕಿಬಿದ್ದಿರುತ್ತಾರೆ. ಮೇಲ್ನೋಟಕ್ಕೆ ಭ್ರಷ್ಟಾಚಾರದ ಆಪಾದನೆಯು ಸಾಬೀತುಗೊಂಡಿರುವುದಾಗಿ ಕಂಡುಬರುವುದರಿಂದ, ಲೋಕಾಯುಕ್ತ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಶಿಫಾರಸ್ಸಿನಂತೆ ಅಧಿಕಾರಿಯವರ ವಿರುದ್ಧದ ವಿಚಾರಣೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಆದೇಶದಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 10 (1)ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರೋಪಿತರನ್ನು ಅಮಾನತ್ತಿನಲ್ಲಿಡಲಾಗಿತ್ತು. ನಂತರ ಆರೋಪಿತರ ವಿರುದ್ಧ ದಾಖಲಾಗಿರುವ ಪ್ರಕರಣ ಸಂಖ್ಯೆ:63/2010 ರ ಅಂತಿಮ ವಿಚಾರಣೆಯನ್ನು ಬಾಕಿಯಿಟ್ಟು ಮೇಲೆ ಓದಲಾದ ಆದೇಶ ಸಂಖ್ಯೆ(2) ರಲ್ಲಿ ಇವರ ಅಮಾನತ್ತನ್ನು ತೆರವುಗೊಳಿಸಿ, ಸ್ಥಳನಿಯುಕ್ತಿಗೊಳಿಸಲಾಗಿದೆ.

2. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರು ಮೇಲೆ ಓದಲಾದ (3) ರ ಪತ್ರದಲ್ಲಿ ಸದರಿ ಆರೋಪಿತ ಅಧಿಕಾರಿಯವರ ವಿರುದ್ಧ ದಾಖಲಾಗಿರುವ ಲಂಚ ಪ್ರಕರಣದಲ್ಲಿ, ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13 (1) (ಡಿ) ಸಹವಾಚನ 13 (2) ರಡಿಯಲ್ಲಿ ಅವರ ಮೇಲಿನ ಆರೋಪಗಳು ಸಾಬೀತಾಗಿರುವುದರಿಂದ, ಅವರನ್ನು ಕಾಯ್ದೆಯ ಕಲಂ 19 (1)(ಬಿ) ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ಮಂಡಿಸಿ, ಲೋಕಾಯುಕ್ತ ಪೊಲೀಸರು ಸಲ್ಲಿಸಿರುವ ಅಭಿಯೋಜನಾ ಮಂಜೂರಾತಿಯ ಕೋರಿಕೆಯನ್ನು ಮೇಲೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಆದೇಶದಲ್ಲಿ ತಿರಸ್ಕರಿಸಲಾಯಿತು.

3. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಸರ್ಕಾರಕ್ಕೆ ಮತ್ತೊಂದು ವರದಿಯನ್ನು ಕಳುಹಿಸಿ, ಕೆಲವು ಸ್ಪಷ್ಟೀಕರಣವನ್ನು ನೀಡಿ ಸರ್ಕಾರದ ಹಿಂದಿನ ನಿಲುವನ್ನು ಪುನರ್ ಪರಿಶೀಲಸಿ ಶ್ರೀ ಎಲ್.ಮೇಘನಾಯ್ಕ್ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಪೂರ್ವಾನುಮತಿ ನೀಡಬೇಕಾಗಿ ಕೋರಿದರು. ಈ ಹಿನ್ನಲೆಯಲ್ಲಿ ಈ ವಿಷಯನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಿ ಮೇಲೆ ಕ್ರಮ ಸಂಖ್ಯೆ: (5) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಲ್.ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು ಇವರನ್ನು ಲಂಚ ನಿರೋಧಕ ಕಾಯ್ದೆ 1988 ರಡಿ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ಕಲಂ 19(1)(ಬಿ) ರನ್ವಯ ಮಂಜೂರಾತಿ ನೀಡಲಾಯಿತು.

4. ಶ್ರೀ ಎಲ್.ಮೇಘನಾಯ್ಕ್ ಇವರು ತಮ್ಮ ವಿರುದ್ಧ ಅಭಿಯೋಜನಾ ಮಂಜೂರಾತಿ ನೀಡಿರುವ ಸರ್ಕಾರದ ಆದೇಶವನ್ನು ಪ್ರಶ್ನಿಸಿ, ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅರ್ಜಿ ಸಂಖ್ಯೆ: 7386/2014 ನ್ನು ಸಲ್ಲಿಸಿದ್ದರು. ಸದರಿ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ ಕ್ರಮ ಸಂಖ್ಯೆ: (6) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರನ್ನು ಅಭಿಯೋಜನೆಗೊಳಪಡಿಸಲು ನೀಡಲಾದ ಮಂಜೂರಾತಿಯ ಆದೇಶವನ್ನು ರದ್ದುಪಡಿಸಿರುತ್ತದೆ.

5. ಶ್ರೀ ಎಲ್.ಮೇಘನಾಯ್ಕ್, ವಿದ್ಯುತ್ ಪರಿವೀಕ್ಷಕರು ಇವರ ಪರವಾಗಿ ಮಾನ್ಯ ಉಚ್ಚನ್ಯಾಯಾಲಯವು ನೀಡಿರುವ ಆದೇಶದ ಹಿನ್ನಲೆಯಲ್ಲಿ, ಮೇಲ್ಕಂಡ ಅಧಿಕಾರಿಯನ್ನು ಅಮಾನತ್ತಿನಲ್ಲಿಡಲಾದ ದಿನಾಂಕ: 19.02.2011 ರಿಂದ 25.05.2011 ರವರೆಗಿನ ಅವಧಿಯನ್ನು ಸಕ್ರಮಗೊಳಿಸಬೇಕಾಗಿದೆ.

ಆದ್ದರಿಂದ, ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ ಇಎನ್ 191 ಇಬಿಎಸ್ 2015, ಬೆಂಗಳೂರು, ದಿನಾಂಕ: 12–02–2016.**

ಕ್ರಿಮಿನಲ್ ಅರ್ಜಿ ಸಂಖ್ಯೆ: 7386/2014 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 07.04.2015 ರಂದು ನೀಡಿರುವ ಆದೇಶದಲ್ಲಿ ಶ್ರೀ ಎಲ್.ಮೇಘನಾಯ್ಕ್ ಇವರನ್ನು ಅಭಿಯೋಜನೆಗೊಳಪಡಿಸಲು ಮಂಜೂರಾತಿಯನ್ನು ನೀಡಲಾಗಿದ್ದ ಸರ್ಕಾರದ ದಿನಾಂಕ: 03.07.2014 ರ ಆದೇಶವನ್ನು ರದ್ದುಪಡಿಸಲಾದ ಕಾರಣ ಅವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವುದು ಅವಶ್ಯವಿರುವುದರಿಂದ, ಶ್ರೀ ಎಲ್.ಮೇಘನಾಯ್ಕ್ ಇವರನ್ನು ಅಮಾನತ್ತಿನಲಿಡಲಾದ ದಿನಾಂಕ: 19.02.2011 ರಿಂದ 25.05.2011 ರವರೆಗಿನ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳು 100(3) ರನ್ವಯ ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

PR. 165

SC. 50

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಶಿವಕುಮಾರ್,**

ಪೀಠಾಧಿಕಾರಿ,

ಇಂಧನ ಇಲಾಖೆ.

## FOREST, ECOLOGY AND ENVIRONMENT SECRETARIAT

**Sub:** Renewal of lease for diversion of 0.80 ha. of forest-land in F.Sy.No.26A of Sabaeri village, Yellapur Taluk, Uttara Kannada District for construction of Girls High School in favour of Viswadarshana Education Society, Yellapur-regarding.

**Read:**

1) Principal Chief Conservator of Forests (Head of Forest Force), Bengaluru Letter No. A5 (2).GFL.CR.08/2008- 09, dt.02-02-20i3.

2) Government of Karnataka Letter No. FEE 13 FLL 2013, dt. 15-04-2013.

3) Government of India, M/o Environment and Forests and Climate Change Letter No. 4-KRB *963/2013/* BAN/6949, dt. 27-04-2015.

4) Principal Chief Conservator of Forests (Head of Forest Force), Bangalore Letter No. *A5 (2).GFL.CR.08/2008*- 09, dt. 20-10-2015.

5) Government of Karnataka Letter No. FEE 13 FLL 2013, dt. 04-12-2015.

6) Government of India, M/o Environment and Forests and Climate Change Letter No. F .No.4-KRB *963/ 2013* -BAN/*7853,* dt. 06-01-2016.

